

ಂಗಳೂರು ವಿಶ್ವವಿದ್ಯಾಲಯ
ಬೆಂಗಳೂರು

# ಜನಪ್ರಿಯ ವಿಜ್ಞಾನ













ಮಕ್ಕಳಿಗೆ ಬರುವ ಕೆಲವು ಸಾಮಾನ್ಯ ರೋಗಗಳು

ಮುದ್ರಣ ನಡೆದು ಬಂದ ದಾರಿ

ಪಾದಗಳ ಆರೈಕೆ

ಮನೋವೈಜ್ಞಾನಿಕ ನಾಟಕ

## ಕೃಷ್ಣಾಯಣ

ಮಾಸಪತ್ರಿಕೆ ಸಂಪುಟ 8 ಸಂಚಿಕೆ 10 ಏಪ್ರಿಲ್ 1984 1 ರೂ.




ಬೆಂಗಳೂರು ವಿಶ್ವವಿದ್ಯಾಲಯ
ಬೆಂಗಳೂರು

# ಜನಪ್ರಿಯ ವಿಜ್ಞಾನ

ಸಂಪುಟ 8 ಸಂಚಿಕೆ 10 ಏಪ್ರಿಲ್ 1984



ಜನಪ್ರಿಯ ವಿಜ್ಞಾನ
ಪ್ರತಿ ತಿಂಗಳ ಒಂದನೆಯ ದಿನಾಂಕದಂದು
ಪ್ರಕಟವಾಗುತ್ತದೆ.
ವಾರ್ಷಿಕ ಚಂದಾ : ಹನ್ನೆರಡು ರೂಪಾಯಿಗಳು
ಲೇಖನಗಳು, ಚಂದಾ, ಜಾಹೀರಾತು ಹಾಗೂ
ಇನ್ನಿತರ ವಿವರಗಳಿಗೆ :
ನಿರ್ದೇಶಕ, ಪ್ರಸಾರಾಂಗ
ಬೆಂಗಳೂರು ವಿಶ್ವವಿದ್ಯಾಲಯ
ಜ್ಞಾನಭಾರತಿ, ಬೆಂಗಳೂರು–560 056
ಇವರೊಂದಿಗೆ ವ್ಯವಹರಿಸಿ.

## ಈ ಸಂಚಿಕೆಯಲ್ಲಿ

## ಮಕ್ಕಳಿಗೆ ಬರುವ ಕೆಲವು

| ರೋಗ | ಕಾರಣ | ಹರಡುವ ಬಗೆ | ಆರಂಭದಲ್ಲಿದ ರೋಗ ಲಕ್ಷಣ | ಎಷ್ಟು ಅಪಾಯಕಾರಿ |
|---|---|---|---|---|
| ೧ ಇನ್‌ಫ್ಲೂಎನ್‌ಝಾ (ಉರಿಶೀತ) | ವೈರಸ್ ಎಂಬ ಸೂಕ್ಷ್ಮಾಣು ಜೀವಿ | ನೆಗಡಿ ಮತ್ತು ಸೀನುಗಳಿಂದ ಬೇರೆಯವರಿಗೆ ಸೋಂಕು ಉಂಟಾಗುತ್ತವೆ. | ಜ್ವರ, ತಲೆನೋವು | ಅಪಾಯಕಾರಿ |
| ೨ ಗದ್ದಕಟ್ಟು (ಗದ್ದಮೋರೆ) | ರೋಗ ತಗುಲಿದ ವ್ಯಕ್ತಿಯ ಜೊಲ್ಲಿನಲ್ಲಿರುವ ಸೂಕ್ಷ್ಮಾಣು | ರೋಗಗ್ರಸ್ಥರ ಬಾಯಿ, ಮೂಗುಗಳಲ್ಲಿನ ವಿಸರ್ಜನೆಗಳ ಮೂಲಕ ಹರಡುವುದು. ಇದು ಅಂಟುರೋಗ | ದವಡೆಗಳ ಮತ್ತು ಕಿವಿ ಸ್ನಾಯುಗಳ ಊತ, ನೋವು, ಆಹಾರನುಂಗಲು ಕಷ್ಟವಾಗುವಿಕೆ | ಚಿಕ್ಕ ಮಕ್ಕಳಿಗೆ ಅಪಾಯಕಾರಿಯಲ್ಲ |
| ೩ ದಡಾರ | ರೋಗಿಗಳ ಗಂಟಲುಗಳಲ್ಲಿ ಮೂಗಿನ ದ್ರವಗಳಲ್ಲಿರುವ ಸೂಕ್ಷ್ಮಾಣು | ರೋಗಗ್ರಸ್ಥರ ಬಾಯಿ, ಮೂಗುಗಳಲ್ಲಿನ ದ್ರವಗಳ ಮೂಲಕ ಹರಡುವುದು. ಇದು ಸಾಂಕ್ರಾಮಿಕ ರೋಗ | ಜ್ವರ, ಕೆಮ್ಮು, ಕಣ್ಣು, ಮೂಗುಗಳಲ್ಲಿ ನೀರೂರುವಿಕೆ, ಮೈಮೇಲೆ ಗಂದೆಗಳು ಕಾಣಿಸುವಿಕೆ | ೩ ವರ್ಷಗಳಿಗೆ ಒಳಪಟ್ಟ ಮಕ್ಕಳಿಗೆ ಇದು ಬಹಳ ಅಪಾಯಕಾರಿ |
| ೪ ಶೀತಾಳೆ ಸಿಡುಬು | ರೋಗಿಗಳ ಬಾಯಿ, ಗಂಟಲು, ಮೂಗಿನ ದ್ರವಗಳಲ್ಲಿರುವ ಸೂಕ್ಷ್ಮಾಣು | ಇದು ತೀವ್ರವಾದ ಅಂಟು ರೋಗ. ರೋಗಿಗಳ ಸಂಪರ್ಕ ಅಥವ ಅವರು ಉಪಯೋಗಿಸಿದ ಬಟ್ಟೆಬರೆಗಳಿಂದ ಹರಡುತ್ತದೆ | ಜ್ವರ ಇದ್ದು, ಚರ್ಮದ ಮೇಲೆ ಗುಳ್ಳೆಗಳು ಕಾಣಿಸಿಕೊಳ್ಳುವುವು | ಅಪಾಯಕಾರಿಯಲ್ಲ. ಇದು ಸಿಡುಬಿನಂತೆ ಕಾಣುವುದು |
| ೫ ಸಿಡುಬು | ರೋಗಿಯ ಮೂಗು, ಗಂಟಲು,ಕರಳು ಮೂತ್ರ ಜನಕಾಂಗಗಳ ದ್ರವಗಳು, ಚರ್ಮದ ಪೊರೆ ಇವುಗಳಲ್ಲಿನ ಸೂಕ್ಷ್ಮಾಣುಗಳು(ನಂಜು) | ರೋಗಿಗಳ ಚರ್ಮ ಮತ್ತು ಗಂಟಲಿನ ಉಗುಳುಗಳಿಂದ ಮತ್ತು ಅವರು ಉಪಯೋಗಿಸಿದ ಬಟ್ಟೆ ಬರೆಗಳಿಂದಲೂ ಹರಡುತ್ತದೆ | ಜ್ವರ, ತಲೆನೋವು, ಬೆನ್ನು ನೋವು ಚರ್ಮದ ಮೇಲೆ ಗುಳ್ಳೆಗಳು | ತುಂಬಾ ಅಪಾಯಕಾರಿ |
| ೬ ಮಕ್ಕಳ ಪಾರ್ಶ್ವ ವಾಯು (ಪೋಲಿಯೋ ಮೆಲಿಟಿಸ್) | ೩ ವಿಧಗಳ ಪೋಲಿಯೋ ಗುರುತಿಸಲ್ಪಟ್ಟಿದೆ.ರೋಗಿಗಳ ಗಂಟಲು, ಮೂಗು ಕರುಳಿನ ಕೊನೆಯ ಭಾಗ ಇವುಗಳಿಂದ ವಿಸರ್ಜಿತ ವಸ್ತುಗಳಲ್ಲಿರುವ ಸೂಕ್ಷ್ಮಾಣುಗಳು | ರೋಗಿಯ ಜೊಲ್ಲು, ಸಿಂಬಳ ಮತ್ತು ರೋಗಾಣುಗಳಿರುವ ಹಾಲಿನಿಂದ ಹರಡುತ್ತದೆ. | ಜ್ವರ, ನೆಮ್ಮದಿ ಭಂಗ, ವಾಂತಿ, ಕತ್ತು ನೋವು, ಬೆನ್ನು ನೋವು, ನಿಶ್ಶಕ್ತಿ, ತಲೆನೋವು | ತುಂಬಾ ಅಪಾಯಕಾರಿ |
| ೭ ಢಿಫ್ತೀರಿಯಾ (ಗಂಡಮಾಲೆ) | ರೋಗಿಗಳ ಮೂಗು, ಗಂಟಲಿನ ದ್ರವಗಳು, ಚರ್ಮ ಇವುಗಳಲ್ಲಿನ (ಬ್ಯಾಸಿಲಸ್) ರೋಗಾಣುಗಳು | ರೋಗಿಗಳ ಸಂಪರ್ಕ ಅಥವ ಅವರು ಬಳಸಿದ ವಸ್ತುಗಳ ಬಳಕೆಯಿಂದ ಹರಡುತ್ತದೆ. | ಗಂಟಲು ನೋವು, ಜ್ವರ, ಹಲವು ಸಲ ಕೆಮ್ಮು ಇದ್ದು ಉಸಿರಾಡಲು ಕಷ್ಟವಾಗುವುದು | ಶೀಘ್ರವಾಗಿ ಚಿಕಿತ್ಸೆ ನಡೆಸದಿದ್ದರೆ ತುಂಬಾ ಅಪಾಯಕಾರಿ |

# ಸಾಮಾನ್ಯ ರೋಗಗಳು

| ತೊಡಕುಗಳು | ರೋಗ ಕಾಣಿಸಿ ಕೊಳ್ಳುವ ಅವಧಿ | ರೋಗ ಸಾಂಕ್ರಾಮಿಕತೆಯ ಅವಧಿ (ಪ್ರತ್ಯೇಕಿಸಬೇಕಾದ ಅವಧಿ) | ನಿರೋಧಕ ಕ್ರಮ :- ದೇವಿ ಹಾಕಿಸುವುದು ಅಥವ ಚುಚ್ಚು ಮದ್ದು | ಹತೋಟಿ | ಕಾಣಿಸಿ ಕೊಳ್ಳುವ ಕಾಲ(ಮೈ ದೋರುವ ಕಾಲ) |
|---|---|---|---|---|---|
| ಸಾಮಾನ್ಯವಾಗಿ ಕಿವಿಗಳ ತೊಂದರೆ ಮತ್ತು ಶ್ವಾಸಕೋಶದ ಉರಿಯೂತ | ೧ ರಿಂದ ೪ ದಿನ ದಿನಗಳು | ತಿಳಿದಿಲ್ಲ. ಜ್ವರ ಇರುವವರೆಗೂ ಅಥವ ರೋಗ ಕಾಣಿಸಿಕೊಂಡ ೭ ದಿನಗಳ ವರೆಗೆ | ಇಲ್ಲ | ವೈಯಕ್ತಿಕ ನೈರ್ಮಲ್ಯ ಜನಸಂಪರ್ಕ ಕಡಿಮೆ ಮಾಡುವುದು ಹಾಗೂ ಬಯಲಲ್ಲಿ ತಿರುಗಾಟ ಇಲ್ಲದಿರುವುದು | ಚಳಿಗಾಲ |
| ಚಿಕ್ಕ ಮಕ್ಕಳಲ್ಲಿ ಬಹಳ ಕಡಿಮೆ | ೧೨ ರಿಂದ ೨೬ ದಿನಗಳು (ಸಾಮಾನ್ಯವಾಗಿ ೧೮ ದಿನಗಳು) | ಊತ ಸಂಪೂರ್ಣ ಇಳಿಯುವವರೆಗೂ | ಇಲ್ಲ | ಊತ ಪೂರ್ಣವಾಗಿ ಇಳಿಯುವವರೆಗೂ ರೋಗಿಯನ್ನು ಪ್ರತ್ಯೇಕಿಸಬೇಕು | ಚಳಿಗಾಲ ಮತ್ತು ಬೇಸಿಗೆಕಾಲ |
| ಸಾಮಾನ್ಯವಾಗಿ ಕಿವಿಗಳ ತೊಂದರೆ,ಕಿವಿಸೋಂಕು ನ್ಯುಮೋನಿಯ | ೮ ರಿಂದ ೧೫ ದಿನಗಳು. ಸಾಮಾನ್ಯವಾಗಿ ೧೨ರಿಂದ ೧೩ ದಿನಗಳು | ರೋಗ ಲಕ್ಷಣಗಳಾದ ಕಫ, ಸಿಂಬಳ ಇತ್ಯಾದಿಗಳು ನಿಲ್ಲುವವರೆಗೆ, ರೋಗ ತಗುಲಿದ ೯ ದಿನಗಳು ಗಂದ ಕಾಣಿಸಿಕೊಳ್ಳುವುದಕ್ಕೆ ೪ ದಿನಗಳ ಮುಂಚೆ ಇಲ್ಲವೆ ೫ ದಿನಗಳು ನಂತರ | ಲಸಿಕೆ ಮತ್ತು ಚುಚ್ಚುಮದ್ದುಗಳಿಂದ ತಡೆಗಟ್ಟಬಹುದು ಅಥವ ಇದರ ಪ್ರಖರತೆಯನ್ನು ತಗ್ಗಿಸಬಹುದು | ಸೋಂಕಿನ ಅವಧಿಯಲ್ಲಿ ರೋಗಿಯನ್ನು ಪ್ರತ್ಯೇಕಿಸುವುದು. ಚಿಕಿತ್ಸೆಯಲ್ಲಿ ರೋಗ ನಿರೋಧಕಗಳ ಬಳಕೆಯಿಂದ ಹತೋಟಿಗೆ ತರಬಹುದು | ಬಹುತೇಕ ವಸಂತಕಾಲ ಚಳಿಗಾಲ ಮುನ್ನ ಮತ್ತು ಚಳಿಗಾಲ |
| ತೊಂದರೆಯೇನೂ ಇಲ್ಲ | ೨ ರಿಂದ ೩ ವಾರಗಳು | ಚರ್ಮದ ಮೇಲೆ ಮತ್ತು ಗಂಟಲು, ತೆಳು ಪೊರೆಗಳಲ್ಲಿ ಗುಳ್ಳೆಗಳು ಇರುವವರೆಗೆ. (ಗುಳ್ಳೆಗಳು ಕಾಣಿಸಿಕೊಂಡ ನಂತರ ಸುಮಾರು ೧೦ ದಿನಗಳು) | ಇಲ್ಲ | ಸಾಂಕ್ರಾಮಿಕ ಅವಧಿಯಲ್ಲಿ ರೋಗಿಯನ್ನು ಪ್ರತ್ಯೇಕಿಸುವಿಕೆ ಚರ್ಮದ ಹೊರಪು ಹೋಗುವವರೆಗೆ ಪ್ರತ್ಯೇಕಿಸಬೇಕಾಗಿಲ್ಲ. | ಚಳಿಗಾಲ |
| ಶ್ವಾಸನಾಳದ ತೊಂದರೆ, ಕಿವಿಯನೋವು,ಕಣ್ಣಲ್ಲಿ ಸೋಂಕಿದ್ದರೆ ಎರಡುಂಟು ಮಾಡಬಹುದು. | ೮ ರಿಂದ ೧೬ ದಿನಗಳು (ಹಲವು ಬಾರಿ ೨೧ ದಿನಗಳು) | ಪ್ರಥಮ ಚಿನ್ಹೆಗಳು ತಲೆದೋರಿದಾಗಿನಿಂದ ಚರ್ಮದ ಎಲ್ಲಾ ಮಚ್ಚೆಗಳು ಹಾಗೂ ಹೊಟ್ಟು ಉದುರುವವರೆಗೆ | ಹೌದು, ದೇವಿ ಹಾಕುವುದರಿಂದ ತುಂಬಾ ಪರಿಣಾಮಕಾರಿ | ಹತೋಟಿಗೆ ತರಲು ರೋಗಿಯ ಚರ್ಮದ ಹೊಟ್ಟನ್ನು ಉದುರುವವರೆಗೆ ಪ್ರತ್ಯೇಕಿಸಬೇಕು | ಚಳಿಗಾಲ |
| ಶರೀರದ ಅನೇಕ ಭಾಗಗಳಲ್ಲಿ ಪಾರ್ಶ್ವವಾಯು | ನಿರ್ಧಿಷ್ಟ ಕಾಲ ಗೊತ್ತಿಲ್ಲದೆ ಇರುವುದರಿಂದ ಸುಮಾರು ೭ ರಿಂದ ೧೪ ದಿನಗಳು | ಖಚಿತಪಟ್ಟಿಲ್ಲ.ರೋಗ ಕಂಡುಬಂದ ನಂತರ ಸುಮಾರು ೧ ರಿಂದ ೩ ವಾರಗಳು | ಪೋಲಿಯೋ ಲಸಿಕೆಯಿಂದ ತಡೆಗಟ್ಟಬಹುದು | ಜ್ವರ ಬಂದಿರುವಾಗ ಮತ್ತು ರೋಗ ಕಂಡು ಬಂದಂದಿನಿಂದ ಸುಮಾರು ೧ ವಾರದ ವರೆಗೆ ಪ್ರತ್ಯೇಕಿಸಬೇಕು | ಜೂನ್‌ನಿಂದ ಸೆಪ್ಟೆಂಬರ್ ಪೂರ್ತಿ |
| ಸಾಮಾನ್ಯವಾಗಿ ತಕ್ಷಣ ಚಿಕಿತ್ಸೆ ನಡೆಸದಿದ್ದರೆ ತೊಂದರೆಯುಂಟು ಮೊದಲಿನಲ್ಲಿ: ಉಸಿರಾಡಲು ಮತ್ತು ಶ್ವಾಸನಾಳದ ತೊಂದರೆ; ನಂತರದಲ್ಲಿ: ಹೃದಯ ರೋಗ, ಪಾರ್ಶ್ವವಾಯು | ೨ ರಿಂದ ೫ ದಿನಗಳು ಒಂದೊಂದು ಸಾರಿ ಹೆಚ್ಚು ದಿನಗಳು ಇರಬಹುದು | ದೇಹದ ವಿಸರ್ಜನೆಗಳಲ್ಲಿ ಸೂಕ್ಷ್ಮಾಣುಗಳು ಇಲ್ಲದವರೆಗೆ | ಡಿಫ್ತೀರಿಯಾ ಟಾಯ್ಡ್ [ಕ್ಸಾ] ಚುಚ್ಚುಮದ್ದಿನಿಂದ ತಡೆಯಬಹುದು. [ಮಕ್ಕಳಿಗೆ ತ್ರಿರೋಗ ನಿರೋಧ ಚುಚ್ಚುಮದ್ದಿನಿಂದ] | ಪ್ರತಿ ೨೪ ಗಂಟೆಗಳಿಗೊಮ್ಮೆ ಗಂಟಲಿನಿಂದ ಜೊಲ್ಲನ್ನು ಪರೀಕ್ಷಿಸಿ, ಸೂಕ್ಷ್ಮಾಣುಗಳು ಇಲ್ಲದಂತಾಗುವವರೆಗೆ ರೋಗಿಯನ್ನು ಪ್ರತ್ಯೇಕಿಸಬೇಕು. ರೋಗವಿರುವಾಗ ಮತ್ತು ನಂತರ ನಂಜು ನಿರೋಧಕ ಔಷಧಿಗಳನ್ನು (ಆಂಟಿ ಬಯೋಟಿಕ್ಸ್) ಬಳಸಬೇಕು | ಚಳಿಗಾಲಕ್ಕೆ ಮುನ್ನ ಹಾಗೂ ಚಳಿಗಾಲದಲ್ಲಿ |

| 1 | 2 | 3 | 4 | 5 |
|---|---|---|---|---|
| ೮ ನಾಯಿ ಕೆಮ್ಮು | ರೋಗಿಗಳ ಜೊಲ್ಲು ಮತ್ತು ಮೂಗಿನ ಸಿಂಬಳದಲ್ಲಿರುವ 'ಪರ್‌ಟುಸಿಸ್' ರೋಗಾಣುಗಳು | ರೋಗಿಗಳ ಕೆಮ್ಮು ಉಗುಳಿನ ಕಫ, ಜೊಲ್ಲು ಮುಂತಾದುವುಗಳಿಂದ | ನೆಗಡಿ-ಶೀತ, ಕೆಮ್ಮು ಇದ್ದು ರೋಗ ತಗುಲಿದ ೧೦ ರಿಂದ ೧೪ ದಿನಗಳಲ್ಲಿ ಕೆಮ್ಮು ಆರಂಭವಾಗುವುದು ಮತ್ತು ತುಂಬಾ ಸಮಯ ಕೆಮ್ಮು ಇರುವುದು | ಅಪಾಯಕಾರಿ |
| ೯ ಧನುರ್ವಾಯು | ರೋಗಿಯ ಗಾಯದ ಸಾಂಕ್ರಾಮಿಕತೆಯ ಸೂಕ್ಷ್ಮಾಣುಗಳು | ಗೊಬ್ಬರ, ಮಲಮೂತ್ರ ವಿಸರ್ಜನೆಗಳು, ಬಿರಿಕಿರುವ ಚರ್ಮ ಇಲ್ಲವೇ ಗಾಯಕ್ಕೆ ಸೇರುವುದು | ದವಡೆಗಳು ಅಲುಗಾಡದೆ ಬಿಗಿಯುವಿಕೆ, ಶರೀರದ ಚಲನೆ ಅತಿಕಷ್ಟವಾಗುವುದು | ತುಂಬಾ ಅಪಾಯಕಾರಿ |
| ೧೦ ಆಮಶಂಕೆ ಬೇಧಿ | ಮನುಷ್ಯನಿಗೆ ತಗಲುವ ಒಂದು ತಂತು ಜೀವಿಯಿಂದ | ರೋಗಿಯ ಮಲ ಮತ್ತು ವಿಸರ್ಜಿತ ದ್ರವಗಳಿಂದ ಕಲುಷಿತವಾದ ಆಹಾರ, ಹಾಲು, ಅಥವಾ ನೀರು ಅಥವ ನೊಣಗಳಿಂದ ಹರಡುವುದು | ಹೆಚ್ಚಾಗುತ್ತಾ ಹೋಗುವ ಅತಿಸಾರ ಭೇಧಿ ಜ್ವರ, ಮಲದಲ್ಲಿ ರಕ್ತ ಮತ್ತು ಕೀವು | ಅಪಾಯಕಾರಿ |
| ೧೧ ಅತಿಸಾರ | ರೋಗ ಹರಡುವ ಸೂಕ್ಷ್ಮಾಣುಗಳು | ರೋಗಿಯ ಮಲದಿಂದ ಮತ್ತು ವಿಸರ್ಜಿತ ದ್ರವಗಳು, ಬೆರಕೆ ಆಹಾರ, ಹಾಲು, ನೀರು, ಅಥವ ನೊಣಗಳಿಂದ ಹರಡು | ಹೆಚ್ಚಾಗುತ್ತಾ ಹೋಗುವ ಅತಿಸಾರ ಭೇಧಿ, ಜ್ವರ, ಮಲದಲ್ಲಿ ರಕ್ತ ಮತ್ತು ಕೀವು ಹೋಗುವುದು | ಕೆಲವು ಬಾರಿ ಅಪಾಯಕಾರಿ, ಮುಖ್ಯವಾಗಿ ಮಕ್ಕಳ ಬಗ್ಗೆ ಹೆಚ್ಚು ಅಪಾಯಕಾರಿ |
| ೧೨ ಟ್ರಕೋಮ ರವೆಗಣ್ಣು | ರವೆಗಣ್ಣು ಹರಡುವ ಸೂಕ್ಷ್ಮಾಣು ಜೀವಿ | ರೋಗಿಗಳೊಡನೆ ಸಂಪರ್ಕದಿಂದ ಅಥವ ಅವರು ಬಳಸಿದ ವಸ್ತುಗಳನ್ನು ಬಳಸುವುದರಿಂದ ಇದು ಹರಡುವುದು | ಕಣ್ಣುಗಳಲ್ಲಿ ನೋವು ಉಂಟಾಗುವುದು ಗುಡ್ಡೆಗಳಲ್ಲಿ ನೋವು | ಅಪಾಯಕಾರಿ |
| ೧೩ ವಿಷಮ ಶೀತ ಜ್ವರ | ಟೈಫಾಯಿಡ್ ಬ್ಯಾಸಿಲಿಸ್ ಎಂಬ ಸೂಕ್ಷ್ಮಾಣುಗಳು | ರೋಗಿಯ ಮಲ ಮೂತ್ರ, ನೊಣ, ಹಾಲು, ನೀರು ಇತ್ಯಾದಿಗಳಿಂದ | ಜ್ವರ, ತಲೆನೊವು, ನೆಮ್ಮದಿ ಇಲ್ಲದಿರುವಿಕೆ | ತುಂಬಾ ಅಪಾಯಕಾರಿ |

| 6 | 7 | 8 | 9 | 10 | 11 |
|---|---|---|---|---|---|
| ಶ್ವಾಸನಾಳದ ರೋಗ ಹಾಗೂ ಪೌಷ್ಟಿಕಾಂಶಗಳ ಕೊರತೆ | ಸಾಮಾನ್ಯವಾಗಿ ೭ ದಿನಗಳು ಅಥವ ೧೦ ದಿನಗಳ ಮುನ್ನ | ಪ್ರಾರಂಭವಾದ ೪-೫ ವಾರಗಳು. ಪ್ರಾರಂಭದ ಹಂತದಲ್ಲಿ ೭ ರಿಂದ ೧೪ ದಿನಗಳ ವರೆಗೆ ಮತ್ತು ಕೆಮ್ಮು ಇರುವಾಗ ೩ ವಾರಗಳ ಕಾಲ. | ತ್ರಿ ರೋಗ ನಿರೋಧಕ ಚುಚ್ಚು ಮದ್ದು | ಬೂಸ್ಟರ್ ಚುಚ್ಚು ಮದ್ದು ತೀವ್ರತೆಯನ್ನು ಕಡಿಮೆ ಮಾಡಬಹುದು | ಚಳಿಗಾಲದ ಕಡೆಯಲ್ಲಿ ಅಥವಾ ವಸಂತ ಕಾಲದ ಪ್ರಾರಂಭದಲ್ಲಿ |
| ಸಾಮಾನ್ಯವಾಗಿ ಇರುವುದಿಲ್ಲ | ೪ ದಿನದಿಂದ ೩ ವಾರಗಳು (ಸಾಮಾನ್ಯವಾಗಿ ೮ ರಿಂದ ೧೦ ದಿನಗಳು. ಹಲವು ಬಾರಿ ಇನ್ನೂ ಹೆಚ್ಚು ಕಾಲ) | ಸಾಂಕ್ರಾಮಿಕವಲ್ಲ. ಅಪರೂಪವಾಗಿ ಗಾಯಗಳ ವಿಸರ್ಜನೆಗಳಿಂದ | ತಡೆಗಟ್ಟಬಹುದು. ಮಗುವಿಗೆ ೯ ತಿಂಗಳ ವಯಸ್ಸು ತುಂಬುವುದರಲ್ಲಿ ತ್ರಿರೋಗ ಚುಚ್ಚು ಮದ್ದು ಹಾಕುವುದರಿಂದ ಇದು ಸಾಧ್ಯ. | ಬೀದಿಯಲ್ಲಿ ಸಂಭವಿಸುವ ಗಾಯಗಳಿಗೆ ಟಿಟಾನಸ್ ಟಾಕ್ಸಾಯ್ಡ್ ಲಸಿಕೆಯನ್ನು ಕೊಡಿಸಿ ರಕ್ಷಣೆ ನೀಡಬೇಕು | ಬೇಸಿಗೆಕಾಲ, ವರ್ಷದ ಯಾವ ಕಾಲದಲ್ಲಿ ಆದರೂ ಆಗಬಹುದು |
| ಕರುಳಿನಲ್ಲಿ ವ್ರಣ | ೨ ರಿಂದ ಕೆಲವು ತಿಂಗಳುಗಳು (ಸಾಮಾನ್ಯವಾಗಿ ೩ ರಿಂದ ೪ ವಾರಗಳು) | ಸೂಕ್ಷ್ಮದರ್ಶಕ ಯಂತ್ರದಲ್ಲಿ ಪರೀಕ್ಷಿಸಿದಾಗ ಮಲದಲ್ಲಿ ಕ್ರಿಮಿಗಳು ಇಲ್ಲದಂತಾಗುವವರೆಗೆ | ಇಲ್ಲ | ರಕ್ಷಿತ ನೀರು ಸರಬರಾಜು, ಪರಿಸರ ನೈರ್ಮಲ್ಯ, ಉತ್ತಮ ಆರೋಗ್ಯ, ಸೂತ್ರ ಪಾಲನೆ, ವೈಯಕ್ತಿಕ ನೈಮನಲ್ಯ | ಮಳೆಗಾಲ |
| ಅಪರೂಪ | ೧ ರಿಂದ ೭ ದಿನಗಳು | ರೋಗವಿರುವಾಗ ಮತ್ತು ಮಲದಲ್ಲಿ ಕ್ರಿಮಿಗಳು ಇಲ್ಲದಂತಾಗುವವರೆಗೆ | ಇಲ್ಲ | ಮಲವನ್ನು ಸಾಗಿಸುವುದರಲ್ಲಿ ಯೋಗ್ಯ ಕ್ರಮ, ಉತ್ತಮ ಆರೋಗ್ಯ ಸೂತ್ರಗಳನ್ನು ಪಾಲಿಸುವುದು, ನೊಣಗಳನ್ನು ಹತೋಟಿನ ತರಬೇಕು. ನೀರಿಗೆ ನೈರ್ಮಲ್ಯ ರಕ್ಷಣೆ | ಮಳೆಗಾಲ |
| ರೆಪ್ಪೆ ಆಕಾರ ಕೆಡುವುದು ಅಂಧತ್ವ ಉಂಟಾಗಬಹುದು | ೫ ರಿಂದ ೧೨ ದಿನಗಳು | ರೋಗ ಹರಡುವಂಥ ಸೂಕ್ಷ್ಮಾಣುಗಳು ಕ್ರಿಯಾಶೀಲವಾಗಿರುವವರೆಗೆ | ಇಲ್ಲ | ತಮ್ಮ ಆರೋಗ್ಯದ ಬಗ್ಗೆ ಎಚ್ಚರಿಕೆ, ಕಣ್ಣಿನ ಪರೀಕ್ಷೆ, ನೊಣಗಳ ಹತೋಟಿ | ಬೇಸಿಗೆ ಮತ್ತು ಮಳೆಗಾಲ |
| ಒಮ್ಮೊಮ್ಮೆ ಚಿಕ್ಕ ಮಕ್ಕಳಿಗೆ ಬರುವುದುಂಟು | ೭ ರಿಂದ ೨೮ ದಿನಗಳು (ಸಾಮಾನ್ಯವಾಗಿ ೧೦ ರಿಂದ ೧೪ ದಿನಗಳು) | ರೋಗವಿರುವಾಗ ಮತ್ತು ಮಲ ಮೂತ್ರಗಳ ಕ್ರಿಮಿಗಳು ಇಲ್ಲದಂತಾಗುವವರೆಗೆ | ನಿರೋಧಕ ಚುಚ್ಚು ಮದ್ದು | ರಕ್ಷಿತ ನೀರು ಸರಬರಾಜು, ಪರಿಸರ ಹಾಗೂ ನೈರ್ಮಲ್ಯ, ಆರೋಗ್ಯಕರ ಆಹಾರ ಸೇವನೆ, ನೊಣಗಳ ಹತೋಟಿ | ಬೇಸಿಗೆ ಮತ್ತು ಮಳೆಗಾಲ |

(ಕೃಪೆ : ಕರ್ನಾಟಕ ಆರೋಗ್ಯ)

# ಗಗನ ನಿಲ್ದಾಣ: ಮುಂದಿನ ಬೃಹತ್ ಹೆಜ್ಜೆ

ಅಮೆರಿಕದ ಗಗನ ಕಾರ್ಯಕ್ರಮದಲ್ಲಿನ ಮುಂದಿನ ಮಹತ್ವಾಕಾಂಕ್ಷೆಯ ಗುರಿ ಒಂದು ಮಾನವಸಹಿತ ಗಗನ ನಿಲ್ದಾಣ. ಇನ್ನು ಒಂದು ದಶಕದೊಳಗೆ, ಪ್ರಾಯಶಃ 1990ರ ದಶಕದ ವೇಳೆಗೆ ಮಾನವರು ಗಗನದಲ್ಲಿ ವಾಸಿಸಲು ಮತ್ತು ಕಾರ್ಯಗಳನ್ನು ನಿರ್ವಹಿಸಲು ಸಾಧ್ಯಗೊಳಿಸುವಂಥ ಶಾಶ್ವತವಾದ ಮಾನವಸಹಿತ ಗಗನ ನಿಲ್ದಾಣವೊಂದನ್ನು ಅಭಿವೃದ್ಧಿಗೊಳಿಸುವಂತೆ ಅಧ್ಯಕ್ಷ ರೇಗನ್ ಅವರು ಅಮೆರಿಕದ ರಾಷ್ಟ್ರೀಯವಾಯುಯಾನ ಮತ್ತು ಗಗನಾಡಳಿತ ಸಂಸ್ಥೆ (ನಾಸಾ)ಗೆ ಜನವರಿ 25 ರಂದು ನಿರ್ದೇಶಿಸಿದರು. "ದೂರದ ನಕ್ಷತ್ರಗಳಿಗೆ ಹೋಗುವ, ಮತ್ತು ಶಾಂತಿಯುತ ಆರ್ಥಿಕ ಹಾಗೂ ವೈಜ್ಞಾನಿಕ ಪ್ರಯೋಜನಗಳಿಗಾಗಿ ಗಗನದಲ್ಲಿ ವಾಸಿಸುವ ಮತ್ತು ಕಾರ್ಯನಿರ್ವಹಿಸುವ ನಮ್ಮ ಕನಸುಗಳನ್ನು ನನಸಾಗಿಸುವ ದಿಶೆಯಲ್ಲಿ ಮುಂದು ವರಿಯಬಹುದು" ಎಂದು ಅಧ್ಯಕ್ಷರು ಹೇಳಿದರು.

ಕಳೆದ ಕೆಲವು ವರ್ಷಗಳ ಅವಧಿಯಲ್ಲಿ ನಾಸಾದ ತಜ್ಞರು ಅಭಿವೃದ್ಧಿಗೊಳಿಸಿರುವ ವಿನ್ಯಾಸದ ಪ್ರಕಾರ ಗಗನ ನಿಲ್ದಾಣವು ನುಣುಪಾದ ಲೋಹದ ಸಿಲಿಂಡರ್‌ಗಳು, ರೆಕ್ಕೆಯಂಥ ಪ್ಯಾನ್‌ಗಳು, ಗಟ್ಟಿಯಾದ ಅಲ್ಯೂಮಿನಿಯಂ ಬೀಮ್‌ಗಳು ಮತ್ತು ಉದ್ದವಾದ ಕ್ರೇನ್‌ನಂಥ ಸಾಧನಗಳಿಂದ ಕೂಡಿದ್ದು ನಿಶ್ಶಬ್ದವಾಗಿ ಆಕಾಶದಲ್ಲಿ ತೇಲುತ್ತಿರುವುದು.

ಯೋಜಿತ ಗಗನ ನಿಲ್ದಾಣದಲ್ಲಿ ಒಂದು ಬಾರಿಗೆ ಅರ್ಧ ಡಜನ್ ಮಾನವರು ವಾಸಿಸಬಹುದು. ಅದು ಭೂಮಿಯ ಮೇಲೆ ಹಲವು ನೂರು ಮೈಲಿಗಳ ಎತ್ತರದ ಕಕ್ಷೆಯಲ್ಲಿ ಪರಿಭ್ರಮಿಸುತ್ತಿರುವುದು. ವೈಜ್ಞಾನಿಕ ಪ್ರಯೋಗಗಳು, ಶೂನ್ಯ ಗುರುತ್ವಾಕರ್ಷಣೆಯಲ್ಲಿ ವಸ್ತು ತಯಾರಿಕೆ, ಭೂ ವೀಕ್ಷಣೆ ಮತ್ತು ಗಗನ ವಾಹನಗಳನ್ನು ಅಲ್ಲಿಂದ ವಿಶ್ವದ ದೂರದ ಪ್ರದೇಶಗಳಿಗೆ ಕಳುಹಿಸುವುದು ಮುಂತಾದ ಸಾಧ್ಯತೆಗಳ ನೂತನ ಪ್ರಪಂಚವನ್ನೇ ಅದು ತೆರೆಯಲಿದೆ.

ಮುಂದಿನ ಎರಡು ವರ್ಷಗಳಲ್ಲಿ ನಾಸಾ ಅಮೆರಿಕದ ಕೈಗಾರಿಕೋದ್ಯಮದ ಜತೆಗೂಡಿ ಉನ್ನತ ತಂತ್ರಜ್ಞಾನಗಳನ್ನು ಅಭಿವೃದ್ಧಿಪಡಿಸಲು, ಗಗನ ನಿಲ್ದಾಣದ ಕಲ್ಪನೆ ಮತ್ತು ತಂತ್ರ ಜ್ಞಾನಗಳನ್ನು ಪರೀಕ್ಷಾ ಸೌಲಭ್ಯಗಳನ್ನು ಸ್ಥಾಪಿಸುವುದು ಮುಂತಾದ ಕಾರ್ಯಗಳನ್ನು ನಿರ್ವಹಿಸಲಿದೆ. ಎರಡು ವರ್ಷಗಳ ಅವಧಿ ಕೊನೆಗೊಳ್ಳುವ ಹೊತ್ತಿಗೆ ಗಗನ ನಿಲ್ದಾಣದ ವ್ಯಾವಹಾರಿಕ ವಿನ್ಯಾಸ ಸಿದ್ಧಗೊಳ್ಳುವುದೆಂದು ನಾಸಾ ನಿರೀಕ್ಷಿಸುತ್ತಿದೆ. ಅನಂತರ ಉಪಕರಣಗಳನ್ನು ಅಭಿವೃದ್ಧಿಗೊಳಿಸುವ ಕಾರ್ಯದಲ್ಲಿ ಮುಂದಾಗುವುದು.

"ಗಗನದಲ್ಲಿ ಮುಂದಿನ ಉಪಯುಕ್ತ ಹೆಜ್ಜೆ" ಎಂದು ನಾಸಾದ ಆಡಳಿತಾಧಿಕಾರಿ ಜೇಮ್ಸ್ ಎಂ. ಬೆಗ್ ವರ್ಣಿಸಿರುವ ಗಗನ ನಿಲ್ದಾಣವು ಕೆಳ ಭೂ ಕಕ್ಷೆಯಲ್ಲಿ ಆರರಿಂದ ಎಂಟು ಮಂದಿ ಚಾಲಕ ಸಿಬ್ಬಂದಿಯವರಿಗೆ ನೆಲೆಯನ್ನೊದಗಿಸುವುದು. ಅದರ ರವಾನೆ ಮತ್ತು ಉಡಾವಣೆಗೆ ಅಂತರಿಕ್ಷ ಷಟಲನ್ನು ಉಪಯೋಗಿಸಲಾಗುವುದು. ಷಟಲ್ ಮೂಲಕ ಚಾಲಕ ಸಿಬ್ಬಂದಿಯವರನ್ನು ಬದಲಾಯಿಸಲು ಮತ್ತು ಮೂರರಿಂದ ಆರು ತಿಂಗಳುಗಳ ಅಂತರದಲ್ಲಿ ಇಂಧನದ ಮರು ಸರಬರಾಜು ಮಾಡಲು ಸಾಧ್ಯವಾಗುವುದು.

ಖಾಸಗಿ ವಲಯಕ್ಕೆ ಪ್ರಸ್ತುತ ಲಭ್ಯವಿಲ್ಲದಿರುವಂಥ ಸಾಮರ್ಥ್ಯಗಳನ್ನು ಒದಗಿಸುವ ಮೂಲಕ ಗಗನ ನಿಲ್ದಾಣವು ಗಗನದ ವಿಸ್ತೃತ ವಾಣಿಜ್ಯ ಬಳಕೆಯನ್ನು ಸಾಧ್ಯಗೊಳಿಸುವುದು.

ಭೂಮಿಯ ಮೇಲೆ ತಯಾರಿಸಲು ಸಾಧ್ಯವಿಲ್ಲದಂಥ ಅತ್ಯಂತ ಶುದ್ಧ ಔಷಧ ವಸ್ತುಗಳನ್ನು, ಮೈಕ್ರೋ ಚಿಪ್‌ಗಳಿಗೆ ಅಗತ್ಯವಾದ ಗ್ಯಾಲಿಯಮ್ ಆರ್ಸೆನೈಡ್ ಹರಳುಗಳನ್ನು, ಭೂಮಿಯ ಮೇಲೆ ಮಿಶ್ರ ಮಾಡಲು ಸಾಧ್ಯವಿಲ್ಲದಂಥ ಮಿಶ್ರ ಲೋಹಗಳನ್ನು ಮತ್ತು ಪ್ಲಾಸ್ಟಿಕ್‌ಗಳು ಹಾಗೂ ಇತರ ಕೃತಕ ವಸ್ತುಗಳ ತಯಾರಿಕೆಗೆ ಹೊಸ ಬಗೆಯ ರಾಸಾಯನಿಕ ಅನ್ಯಪರಿಣಾಮಕಗಳನ್ನು ವಾಣಿಜ್ಯ ಪ್ರಮಾಣದಲ್ಲಿ ಗಗನ ನಿಲ್ದಾಣದಲ್ಲಿ ತಯಾರಿಸಲು ಸಾಧ್ಯವಾಗುವುದು. ದೂರ ಸಂವೇದಿ ಉಪಕರಣಗಳನ್ನು ಬದಲಾಯಿಸುವ ಅವಕಾಶವನ್ನೂ ಗಗನ ನಿಲ್ದಾಣ ಒದಗಿಸುವುದು.

ಮಾನವರಹಿತ ಗಗನ ವೇದಿಕೆಗಳು ಮತ್ತು ಉಪಗ್ರಹಗಳನ್ನು ರಿಪೇರಿ ಮಾಡಲು, ಸರ್ವೀಸ್ ಮಾಡಲು ಗಗನ ನಿಲ್ದಾಣ ಒಂದು ಖಾಯಂ ನೆಲೆಯಾಗಿ ಉಪಯೋಗಕ್ಕೆ ಬರುವುದು. ತನ್ಮೂಲಕ ಈ ದುಬಾರಿಯಾದ ಗಗನ ಕಾಯಗಳ ಜೀವಾವಧಿಯನ್ನು ಹೆಚ್ಚಿಸಲು ಮತ್ತು ಗಗನ ವ್ಯವಸ್ಥೆಗಳು ಮತ್ತು ತಂತ್ರಜ್ಞಾನದ ಮುನ್ನಡೆಗಳ ಉಪಯುಕ್ತತೆಯನ್ನು ಹೆಚ್ಚಿಸಲು ಸಾಧ್ಯವಾಗುವುದು. ಅಂಟೆನ್ನಾಗಳು ಖಗೋಳ ವೈಜ್ಞಾನಿಕ ದೂರದರ್ಶಕಗಳು ಮತ್ತು ಉಪಗ್ರಹಗಳು ಮುಂತಾದ ಭಾರೀ ಗಗನ ರಚನೆಗಳನ್ನು ಅವುಗಳನ್ನು ನೆಲೆಗೊಳಿಸುವುದಕ್ಕೆ ಮುಂಚೆ ಪರೀಕ್ಷಿಸಲು ಮತ್ತು ಕಕ್ಷೆಯಲ್ಲೇ ಜೋಡಿಸಲೂ ಇದರಿಂದ ಸಾಧ್ಯವಾಗುವುದು.

ಜತೆಗೆ ಗಗನ-ಭೌತಶಾಸ್ತ್ರ, ಸೌರವ್ಯವಸ್ಥೆಯ ಪರಿಶೋಧನೆ, ಭೂ ವಿಜ್ಞಾನ ಮತ್ತು ಅನ್ವಯಗಳು, ಜೀವವಿಜ್ಞಾನಗಳು, ವಸ್ತುಗಳ ಸಂಸ್ಕರಣ ಮತ್ತು ಸಂಪರ್ಕಗಳು ಮುಂತಾದ ಕ್ಷೇತ್ರಗಳಲ್ಲಿ ಗಗನದಲ್ಲೇ ವೈಜ್ಞಾನಿಕ ಸಂಶೋಧನೆಗಳನ್ನು ನಡೆಸಲು ಗಗನ ನಿಲ್ದಾಣ ಅವಕಾಶಗಳನ್ನೊದಗಿಸುವುದು.

ಗಗನದಲ್ಲಿ ಮಾನವರ ವಾಸದ ಅವಧಿಯನ್ನು ಹೆಚ್ಚಿಸುವ ಬಗೆಗೆ ಉದ್ದೇಶಿತವಾದ ಸಂಶೋಧನೆಗೆ, ಭವಿಷ್ಯದ ಮಾನವಸಹಿತ ಗಗನ ಪರಿಶೋಧನೆ ಮತ್ತು ಗಗನದ ಬಳಕೆಗಳಿಗೆ ಗಗನ ನಿಲ್ದಾಣ ನೆರವಾಗುವುದು.

ಅಮೆರಿಕದ ಗಗನ ನಿಲ್ದಾಣ ಕಾರ್ಯಕ್ರಮದಲ್ಲಿ ಇತರ ರಾಷ್ಟ್ರಗಳೂ ಸಹಕರಿಸುವುವೆಂದು ಅಮೆರಿಕ ಆಶಿಸುತ್ತದೆ.

(ಕೃಪೆ : ಅಮೆರಿಕನ್ ವಾರ್ತೆ)

# ಅಪರೂಪದ ಕೋಗಿಲೆ

ಫೋಟೋ ಮತ್ತು ಲೇಖನ : ಡಾ|| ಎಸ್. ಎ. ಮಧ್ಯಸ್ಥ

ಈಗ ಕೆಲವು ತಿಂಗಳ ಹಿಂದೆ 'ಉದಯ ವಾಣಿ' ಪತ್ರಿಕಾ ಕಚೇರಿಗೆ ಕಾಗೆಗಳಿಂದ ಓಡಿಸಿಕೊಂಡು ಬಂದ ಹಕ್ಕಿಯೊಂದರ ಆಗ ಮನ. ಮೇಲ್ನೋಟದಿಂದ ಅದನ್ನು ಹೆಣ್ಣು ಕೋಗಿಲೆಯೆಂದು ಗುರುತಿಸಲಾಯಿತಾದರೂ, ಅದರ ಕಪ್ಪು ತಲೆ, ಕಂದುಬಣ್ಣದ ಕಣ್ಣುಗಳು, ಮೈಮೇಲಿರುವ ವಿರಳವಾದ ಬಿಳಿ ಚುಕ್ಕೆಗಳು ಸ್ವಲ್ಪ ಅನುಮಾನಕ್ಕೆ ಆಸ್ಪದಕೊಟ್ಟಿತು· ತಲೆ ಭಾಗ ಗಂಡು ಕೋಗಿಲೆಯನ್ನು ಉಳಿದ ಭಾಗ ಹೆಣ್ಣು ಕೋಗಿಲೆಯನ್ನು ಹೋಲುತ್ತಿತ್ತು. ಹೆಚ್ಚಿನ ವಿವರಣೆ ಮತ್ತು ಮಾಹಿತಿಗಾಗಿ Bombay National History Society ಯನ್ನು ಸಂಪರ್ಕಿಸಿದಾಗ ದೊರೆತ ಉತ್ತರ ''ಈ ರೀತಿಯ ಕೇವಲ ಕೆಲವು ಕೋಗಿಲೆಗಳನ್ನು ಮಾತ್ರ ಈವರೆಗೆ ಗಮನಿಸ ಲಾಗಿದೆ ; ಅವುಗಳ ಹೊರನೋಟ ನಿಜಕ್ಕೂ ವಿಸ್ಮಯ. ಅವುಗಳು ಹೆಣ್ಣು ಹೊದಿಕೆಯ ಗಂಡು ಕೋಗಿಲೆಗಳೋ ಅಥವಾ ಗಂಡು ಹೊದಿಕೆಯ ಹೆಣ್ಣು ಕೋಗಿಲೆಗಳೋ ಹೇಳು ವುದು ಸಾಧ್ಯವಿಲ್ಲ. ಕಾರಣ ಅವುಗಳ ಒಳ ಅಂಗಶಾಸ್ತ್ರದ ಅಧ್ಯಯನ ನಡೆಸದೇ ಇರು ವುದು''.

ಅಂದರೆ ಇದೊಂದು ವಿಚಿತ್ರ ಕೋಗಿಲೆ ! ಪ್ರಾಣಿ ಪ್ರಪಂಚದಲ್ಲಿ ಇಂತಹ ವಿಚಿತ್ರಗಳು ಆಗಾಗ್ಗೆ ಕಂಡುಬಂದರೂ, ಅವುಗಳ ಬಗ್ಗೆ ನಮ್ಮ ಗಮನ ಹರಿಯುವುದು ತೀರ ಅಪ ರೂಪ.



---

## ವಿಜ್ಞಾನದ ಒಗಟುಗಳು

1 ಅಕ್ಕನ ಮನೆಗೆ ದೀಪ ಹಚ್ಚಿದರೆ
ತಂಗಿ ಮನೆಗೆ ಬೆಳಕು

2 ಆಚೊಂದಾವರೆ
ಈಚೊಂದಾವರೆ
ಪಚ್ಚೆನಂಗಡಿ
ಪಾರ್ಶ್ವನಂಗಡಿ
ಎತ್ತ ನೋಡಿದರೂ ಒಂದೇ ಅಂಗಡಿ

3 ಅಂಬಿನಂತೆ ಹರೀತದೆ
ಕೊಂಬಿನಂತೆ ಕೂಗ್ತದೆ

4 ಊರ ಮುಂದೆ ಕೆರೆಯುಂಟು
ಕೆಸರಿಲ್ಲ ನೀರುಂಟು

5 ಕಪ್ಪುಂಟು ಕಸ್ತೂರಿ ಅಲ್ಲ
ಜಲವುಂಟು ಕೊಳವಲ್ಲ
ರೆಕ್ಕೆ ಉಂಟು ಪಕ್ಷಿಯಲ್ಲ

6 ಕಾಗೆಗಿಂತ ಕಪ್ಪು
ಸುಣ್ಣಕ್ಕಿಂತ ಬಿಳುಪು
ಸಮುದ್ರಕ್ಕಿಂತ ದೊಡ್ಡದು
ನೋಡಿದರೆ ಸಣ್ಣದು

ಉತ್ತರಗಳು :

1 ಚಂದ್ರ
(ಅಕ್ಕನ ಮನೆ=ಆಕಾಶ
ತಂಗಿ ಮನೆ=ಭೂಮಿ
ದೀಪ=ಚಂದ್ರ
ಬೆಳಕು=ಬೆಳದಿಂಗಳು
2 ಸೂರ್ಯ, 3 ರೈಲು
4 ಕಣ್ಣುಗಳು, 5 ಕಣ್ಣುಗಳು
6 ಕಣ್ಣುಗಳು

ಒಗಟು ಹೇಳಿದವರು : ಜಿ. ವಿ. ಶಶಿಧರ

# ಮಿಶ್ರ ತಳಿ ಶಕ್ತಿ

ಎಮ್ಮೆಸ್ಸೆಸ್ಸಾರ್




ಮುಸುಕಿನ ಜೋಳದಲ್ಲಿ ಮಿಶ್ರತಳಿ ಅಥವಾ ಸತ್ವ (1) ಮತ್ತು (3) ಸತ್ವಗಳು (ಹೊರ ಬಣಿಯವು (2) ನೇ ಅಥವಾ ಮಧ್ಯದ ಮಿಶ್ರ ತಳಿಗೆ (ಹೈಬ್ರಿಡ್) ಮೂಲ ಮಾತಾ-ಪಿತ್ರ ಸಸ್ಯಗಳಾಗಿವೆ.

ಮಿಶ್ರ (ಸಂಕರ) ತಳಿ ಶಕ್ತಿ ಅಥವಾ ಸತ್ವ ಎಂಬುದು (ಹೈಬ್ರಿಡ್ ವಿಗರ್ ಅಥವಾ ಹೆಟಿರೊಸಿಸ್) ಅಂತಃ ಪ್ರಜನನಕ್ಕೆ (ಇನ್ ಬ್ರೀಡಿಂಗ್) ನಿಕಟವಾಗಿ ಸಂಬಂಧಿಸಿರುತ್ತದೆ. ಇದು ಸಾಮಾನ್ಯವಾಗಿ ಸಸ್ಯ-ಪ್ರಾಣಿಗಳೆರಡ ರಲ್ಲಿಯೂ ಉಂಟಾಗುವುದು ಕಂಡುಬರುತ್ತದೆ. ಈ ಮಿಶ್ರ ತಳಿ ಶಕ್ತಿ ಅಥವಾ ಸತ್ವವು, 2 ಭಿನ್ನ ಹಾಗೂ ಸಮಯುಗ್ಮಜ ವಿಭೇದದ ತಳಿಗಳನ್ನು (ಡೈವರ್ಸ್ ಹೋಮೊಸೈಗಸ್ ಸ್ಟ್ರೇನ್ಸ್) ಸಂಯೋಗಿಸಿದಾಗ, ಅಥವಾ ಸಂಕರಣಕ್ಕೆ ಒಳಪಡಿಸಿದಾಗ ಹೆಚ್ಚು ಎದ್ದು ಕಾಣುವುದುಂಟು. ಈ ಮಿಶ್ರ ತಳಿ ಶಕ್ತಿಯು (ಹೆಟಿರೊಸಿಸ್), ಯಾವುದೇ ಒಂದು ಸಸ್ಯವನ್ನು ಇಡಿಯಾಗಿ ಇಲ್ಲವೇ ಸಂಪೂರ್ಣವಾಗಿ ಮಾರ್ಪಡಿಸಿದೆ. ಅದರ ಭಿನ್ನ ಭಿನ್ನ ಭಾಗಗಳ ರೂಪ ಲಕ್ಷಣಗಳ ಮಾರ್ಪಾಟುಗಳಿಗಷ್ಟೇ ಮೀಸಲಾಗಿರುವುದುಂಟು. ಷೆಲ್ ಎಂಬಾತನು ಮುಸುಕಿನ (ಗೋವಿನ) ಜೋಳದಲ್ಲಿ ಒಂದು ವಾಣಿಜ್ಯ ಮಹತ್ವದ ತಳಿಯನ್ನು ಉತ್ಪಾದಿಸಿದ್ದಾನೆ. ಇದು ಮಿಶ್ರ ತಳಿ ಶಕ್ತಿಗೆ ಒಂದು ಉತ್ತಮ ನಿದರ್ಶನವಾಗಿದೆ.

ಸಹಜ ರೀತಿಯ ನೈಸರ್ಗಿಕ ಸ್ವಪರಾಗ ಸಂಪರ್ಕ ಕ್ರಿಯೆ ಹೊಂದಿದ ಸನ್ನಿವೇಶಗಳಲ್ಲಿ ಮುಸುಕಿನ ಜೋಳದ ಸಸ್ಯಗಳು ಅನಪೇಕ್ಷಿತ ಮತ್ತು ಅನಾರೋಗ್ಯ ತಳಿಗಳನ್ನು ಉತ್ಪಾದಿಸುತ್ತವೆ. ಹೀಗಾಗಿ ಅಂತಹ ತಳಿಗಳು ಗಾತ್ರದಲ್ಲಿ ಗಿಡ್ಡಾಗಿಯೂ ಇಳುವರಿ ದೃಷ್ಟಿಯಿಂದ ಕುಂಠಿತವೂ ತಳಿ ಶಕ್ತಿ ಅಥವಾ ತಳಿ ಸತ್ವದಲ್ಲಿ ಕನಿಷ್ಟವೂ ಸಮಯುಗ್ಮಜ ರೂಪದವೂ (ಸಾಮಾನ್ಯವಾಗಿ ಶುದ್ಧ ಸಂತತಿಯ ತಳಿಗಳು) ಮತ್ತು ಎಲ್ಲ ಒಂದೇ ಬಗೆಯವೂ ಅಥವಾ ಏಕರೀತಿಯವೂ (ಯೂನಿಫಾರ್ಮ್) ಆಗಿರುತ್ತವೆ.

ಈಗ ಈ ಬಗೆಯ 2 ಶುದ್ಧ ಸಂತತಿಯ ತಳಿಗಳನ್ನು ಸಂಯೋಗಿಸಿದಾಗ, ಮೊದಲನೆ ($F_1$) ಪೀಳಿಗೆಯುಲ್ಲಿ ಉಂಟಾಗುವ ಸಂಕರ (ಮಿಶ್ರ) ತಳಿಗಳು ಗಾತ್ರದಲ್ಲಿ ದೊಡ್ಡದಾಗಿಯೂ, ಹೆಚ್ಚು ಎತ್ತರವಾಗಿಯೂ, ಆರೋಗ್ಯಕರವಾಗಿಯೂ ಮತ್ತು ಶಕ್ತಿಶಾಲಿಯೂ ಆಗಿರುತ್ತವೆ. ಇದಕ್ಕೆ 'ಏಕ ಸಂಯೋಗ ವಿಧಾನ' (ಸಿಂಗಲ್ ಕ್ರಾಸ್ ಮೆಥಡ್) ಎಂದು ಹೇಳುವುದುಂಟು.

ಷೆಲ್ ಎಂಬಾತನು ತನ್ನ ಕೆಲವು ಪ್ರಯೋಗಗಳಲ್ಲಿ 'ದ್ವಿ ಸಂಯೋಗ ವಿಧಾನ' ವನ್ನು (ಡಬಲ್ ಕ್ರಾಸ್ ಮೆಥಡ್) (ಅಂದರೆ ಮೊದಲನೆಯ ಅಥವಾ $F_1$ ಸಂತತಿಯ 2 ಸಂಕರ ತಳಿಗಳನ್ನು ಸಂಯೋಗಿಸುವುದು) ಅನುಸರಿಸಿದ್ದುಂಟು. ಈ ವಿಧಾನದಲ್ಲಿ ಅಂತಃ ಪ್ರಜನನ ಹೊಂದಿದ 2 ಜೋಡಿ ತಳಿಗಳನ್ನು (ಅವುಗಳಿಗೆ A.B.C.D.) ತಳಿಗಳೆನ್ನಬಹುದು) ಆಳವಡಿಸಿ ಕೊಳ್ಳಲಾಯಿತು. ಈ ತಳಿಗಳನ್ನು ಅವುಗಳ ವಿಶಿಷ್ಟ ಹಾಗೂ ಅಪೇಕ್ಷಣೀಯ ಗುಣಲಕ್ಷಣಗಳಿಗಾಗಿ ಆರಿಸಿಕೊಳ್ಳಲಾಯಿತು. 'A' ತಳಿಯನ್ನು 'B' ತಳಿಯೊಂದಿಗೂ, 'C' ತಳಿಯನ್ನು 'D' ತಳಿಯೊಂದಿಗೂ ಸಂಯೋಗಿಸಲಾಯಿತು. ಈ ಬಗೆಯ ಸಂಯೋಗ ಕ್ರಿಯೆಯಲ್ಲಿ (ಸೆಕೆಂಡ್ ಕ್ರಾಸ್) ಉತ್ಪಾದನೆಯಾದ ಬೀಜಗಳೇ ವಾಣಿಜ್ಯ ಮಹತ್ವದ ಹಾಗೂ ಮಿಶ್ರ ತಳಿ ಶಕ್ತಿ ಸಂಪನ್ನ ಬೀಜಗಳಾಗಿ ಪರಿಣಮಿಸಿದವು.

ಮೊದಲನೆಯ ಸಂಯೋಗದಲ್ಲಿ ಉತ್ಪಾದನೆಯಾದ ಬೀಜಗಳನ್ನು ಶಕ್ತಿ ಸಂಪನ್ನ ಬೆಳೆಯ ಉತ್ಪಾದನೆಗೆ ಬಳಸಲಾಗುವುದಿಲ್ಲ. ಏಕೆಂದರೆ, 2 ಮೂಲ ಸಸ್ಯಗಳ ಅಂತಃ ಪ್ರಜನನದಿಂದ (ಇನ್ ಬ್ರೀಡಿಂಗ್ ಉಂಟಾದ ಬೀಜಗಳು ಸಣ್ಣ ಗಾತ್ರದ, ಕಡಿಮೆ ಇಳುವರಿಯುಳ್ಳ ಹಾಗೂ ಅಲ್ಪ ಮಿಶ್ರ ತಳಿ ಶಕ್ತಿಯುಳ್ಳ, ಮತ್ತು ಸಂಖ್ಯಾಕ್ಷೀಣ ಹೊಂದುವ ಸಸ್ಯಗಳನ್ನು ಉತ್ಪಾದಿಸುತ್ತವೆಯೆಂದು ಕಂಡುಬಂದಿದೆ.

ಆದರೆ ಮೊದಲನೆಯ ($F_1$) ಸಂತತಿಯ 2 ಸಂಕರ ತಳಿಗಳನ್ನು ಸಂಯೋಗಿಸಿದಾಗ ಮಾತ್ರ ಮುಂದಿನ 2ನೇ ಸಂತತಿಯಲ್ಲಿ ($F_2$), ಅಧಿಕ ಸಂಖ್ಯೆಯವೂ, ದೊಡ್ಡ ಗಾತ್ರದವೂ,




ವಾಣಿಜ್ಯ ಮಹತ್ವದ ಮುಸುಕಿನ ಜೋಳದ ಮಿ (ಸಂಕರ)ತಳಿಯನ್ನು ಉತ್ಪಾದಿಸುವ ವಿಧಾನ : IL ಅ ಪ್ರಜನನ ಹೊಂದಿದ ಸಂತತಿ (ಇನ್‌ಬ್ರೆಡ್‌ಹೈ H. ಮಿಶ್ರ (ಸಂಕರ) ತಳಿ(ಹೈಬ್ರಿಡ್), HL. ಸುಧಾ

(14ನೇ ಪುಟ ನೋ

# ಮುದ್ರಣ ನಡೆದು ಬಂದ ದಾರಿ

ಶಿ. ಮುರಳಿಮೋಹನ್

ಮಾನವನ ಜ್ಞಾನದಾಹ ದಿನದಿಂದ ದಿನಕ್ಕೆ ಬೆಳೆಯುತ್ತಿದೆ. ಪ್ರಸಾರ ಸಾಧನಗಳು ಇದಕ್ಕೆ ಪೋಷಕವಾಗಿವೆ. ರೇಡಿಯೋ, ಟೆಲಿವಿಜನ್‌ಗಳು ಅತಿ ಮಹತ್ವಾದರೂ ಮುದ್ರಣದ ಪ್ರಾಮುಖ್ಯತೆ ಎಳ್ಳಷ್ಟೂ ಕಡಿಮೆಯಾಗಿಲ್ಲ. ಮುದ್ರಿತ ಪ್ರತಿಗಳ ಸಂಖ್ಯೆ ಕೂಡ ಹಿರಿದಾಗ ಬೇಕಿದೆ. ಮುದ್ರಣವು ಪ್ರಸಾರ ಮಾಧ್ಯಮದ ಅತಿ ಮುಖ್ಯ ಎನ್ನಬಹುದು.

## ಮುದ್ರಣ ಜನ್ಮ

ಪ್ರಾಚೀನ ಕಾಲದ ಜನರಿಗೆ ಅಕ್ಷರಗಳ ಬಳಕೆ ಗೊತ್ತಿರಲಿಲ್ಲ. ಪ್ರಸಾರ ಮಾಧ್ಯಮಕ್ಕೆ ಚಿತ್ರಗಳನ್ನು ಬಳಸುತ್ತಿದ್ದರು. ಕಾಗದವೂ ಶೋಧನೆಗೊಂಡಿರಲಿಲ್ಲ. ಚಿತ್ರಗಳನ್ನು ಕಲ್ಲು, ಮರ, ಜೇಡಿಮಣ್ಣಿನ ಫಲಕ, ಇವುಗಳ ಮೇಲೆ ಬರೆದು ತಮ್ಮ ಅಭಿಪ್ರಾಯವನ್ನು ತಿಳಿಸುತ್ತಿದ್ದರು.

## ಹಲಗೆಯ ಕೆತ್ತನೆ-ಮೊಳೆಗಳ ಜೋಡಣೆ

ಕೆಲವು ಶತಮಾನಗಳಲ್ಲಿ ಜನರು ಕಾಗದ ಹಾಗೂ ಅಕ್ಷರಗಳನ್ನು ಕಂಡುಹಿಡಿದರು. ಆಗ ಮರದ ಹಲಗೆಯ ಮೇಲೆ ಅಕ್ಷರಗಳನ್ನು ಕೊರೆದು ಅದಕ್ಕೆ ಶಾಯಿಯನ್ನು ಹಚ್ಚಿ ಅದರ ಮೇಲೆ ಕಾಗದವನ್ನಿಟ್ಟು ಒತ್ತಡವನ್ನು ಕೊಟ್ಟು ಅಚ್ಚಾದ ಪ್ರತಿಗಳನ್ನು ಪಡೆಯುತ್ತಿದ್ದರು.

15 ನೇ ಶತಮಾನದಲ್ಲಿ ಜಾನ್ ಗುಟನ್‌ಬರ್ಗ್ ಎನ್ನುವವನು ಬಿಡಿಯಾದ ಮುದ್ರಣ ಮೊಳೆಗಳನ್ನು ಜೋಡಿಸಿ ಮುದ್ರಿಸುವುದನ್ನು ಕಂಡುಹಿಡಿದ. ಸೀಸದಿಂದ ಎರಕ ಹೊಯ್ದ ಪ್ರತಿಯೊಂದು ಅಕ್ಷರದ ಬಿಡಿಯಾದ ಮೊಳೆಗಳನ್ನು ಜೋಡಿಸಿ ಮುದ್ರಿಸುವ ವಿಧಾನ ಇದು (ಚಿತ್ರ 1.)

## ಮೊಳೆಗಳ ಜೋಡಣೆಯಿಂದ ಮುದ್ರಿಸುವ ಯಂತ್ರಗಳು.

ಜೋಡಿಸಿದ ಮುದ್ರಣ ಮೊಳೆಗಳ ಸಮೂಹ ಒಂದು ಫಲಕದ ಮಾದರಿಯನ್ನು ಹೊಂದುತ್ತದೆ. ಈ ಫಲಕದ ಮಾದರಿಗೆ ವಸ್ತು (ಮ್ಯಾಟರ್) ಎನ್ನುವರು. ಈ ವಸ್ತುವಿಗೆ ಶಾಯಿಯನ್ನು ಹಚ್ಚಿ ಪ್ರತಿಗಳನ್ನು ತೆಗೆಯಲು ಪ್ರಾರಂಭಿಸಿದರು. ಈ ರೀತಿಯಾಗಿ ಜೋಡಣೆ ಹೊಂದಿದ ಮೊಳೆಗಳ ಸಮೂಹದಿಂದ ಮುದ್ರಿಸುವ ವಿಧಾನವನ್ನು ನಾವು ಇಂದು ಎಲ್ಲ ಮುದ್ರಣಾಲಯಗಳಲ್ಲೂ ಕಾಣಬಹುದಾಗಿದೆ (ಚಿತ್ರ 2 ರಲ್ಲಿ ನಂತೆ).

ಮೇಲಿನ ಮುದ್ರಣದ ವಿಧಾನದಲ್ಲೇ ಹೆಚ್ಚು ಮುದ್ರಣ ಪ್ರತಿಗಳನ್ನು ತ್ವರಿತಗತಿಯಲ್ಲಿ ಮಾಡಲು ಸಿಲಿಂಡರ್ ಮುದ್ರಣ ಯಂತ್ರವನ್ನು ಬಳಸಲಾಗುತ್ತದೆ.

ಶಾಯಿ ಯುಕ್ತ ಸಿಲಿಂಡರ್ ಶಾಯಿಯನ್ನು ಲೇಪಿಸುತ್ತದೆ. ಹಿಂದೆ ಮುಂದೆ ಚಲಿಸುವ ತಳಪಾಯ ಒತ್ತಡದ ಸಿಲಿಂಡರ್ ಬಳಿಗೆ ಬಂದಾಗ ಕಾಗದವು ಒತ್ತಡದ ಸಿಲಿಂಡರ್ ಮತ್ತು ಮೊಳೆಗಳ ಸಮೂಹದ ಮಧ್ಯ ಹಾದು ಮುದ್ರಣಗೊಳ್ಳುತ್ತದೆ.




ಚಿತ್ರ 1

ಅತಿ ಕಡಿಮೆ ಸಮಯ ಹಾಗೂ ಹೆಚ್ಚು ಪ್ರತಿಗಳನ್ನು ತೆಗೆಯಲು ರೋಟರಿ ಯಂತ್ರಗಳನ್ನು ಬಳಸಲಾಗುತ್ತದೆ (ಸಾಮಾನ್ಯವಾಗಿ ದಿನ ಪತ್ರಿಕೆಗಳನ್ನು ಮುದ್ರಿಸಲು)

ಕಾಗದವು ಒತ್ತಡ ಹಾಗೂ ಮೊಳೆಗಳ ಸಮೂಹದ ರೀತಿಯ ಅರ್ಧವೃತ್ತಾಕಾರದ ಎರಡು ಫಲಕಗಳನ್ನು ಹೊಂದಿರುವ ಪೂರ್ಣ




ಚಿತ್ರ 2 : A. ಶಾಯಿಯನ್ನು ಹಚ್ಚಿರುವ ವೃತ್ತಾಕಾರದ ಫಲಕ,
B. ಮೊಳೆಗಳಿಂದ ಜೋಡಿಸಲ್ಪಟ್ಟಿರುವ ಫಲಕ (ಮುದ್ರಣ ವಸ್ತು).
C. ಕಾಗದವನ್ನು ಮೊಳೆಗಳಿಂದ ಜೋಡಿಸಿರುವ ಫಲಕಕ್ಕೆ ಕೊಂಡೊಯ್ಯುವ ಕಬ್ಬಿಣದ ಫಲಕ




ಚಿತ್ರ 3; I. ಶಾಯಿಯುಕ್ತ ಸಿಲಿಂಡರ್. Im. ಒತ್ತಡದ ಸಿಲಿಂಡರ್
A. ಮೊಳೆಗಳನ್ನು ಜೋಡಿಸಿರುವ ಅಕ್ಷರಗಳ ಸಮೂಹ,
P. ಕಾಗದ ಹಾದು ಹೋಗಬೇಕಾದ ಹಾದಿ

ವೃತ್ತಾಕಾರದ ಸಿಲಿಂಡರ್ ಮಧ್ಯೆ ಹೋಗುತ್ತದೆ.

ಮುದ್ರಣದ ಭಾಗವನ್ನು ಉಬ್ಬುಮಾಡಿ ಇಲ್ಲವೇ ತಗ್ಗುಮಾಡಿ ಮುದ್ರಿಸುವುದು ಸಾಮಾನ್ಯ. ಆದರೆ ಮುದ್ರಣಕ್ಕೊಂದು ಹೊಸ ಆಯಾಮ ಬಂದುದು ಲಿಥೋ ಮುದ್ರಣದಿಂದ.

## ಬಟ್ಟೆಯ ಪಟ್ಟಿ-"ಲಿಥೋಗ್ರಾಫಿಯ'' ಜನನಕ್ಕೊಂದು ಹಾದಿ

ಇದರ ಜನಕ ಸೇನಿ ಫೀಲ್ಡರ್. ಇವನು 19 ನೇ ಶತಮಾನದ ಅಂತ್ಯದಲ್ಲಿ ತಾಮ್ರದ ಫಲಕಗಳ ಮೇಲೆ ಕೆತ್ತನೆಯ ಅಭ್ಯಾಸ ಮಾಡುತ್ತಿದ್ದ. ತಾಮ್ರದ ಬೆಲೆ ಹೆಚ್ಚಾಗಿದ್ದುದರಿಂದ ಬವೇರಿಯನ್ ಸುಣ್ಣ ಕಲ್ಲಿನ ಮೇಲೆ ಕೆತ್ತನೆಯ ಅಭ್ಯಾಸವನ್ನು ಪ್ರಾರಂಭಿಸಿದ. ಆದರೆ ಸುಣ್ಣ ಕಲ್ಲೂ ಹೇರಳವಾಗಿ ಸಿಕ್ಕುತ್ತಿರಲಿಲ್ಲ.

ಒಮ್ಮೆ ಅವನ ತಾಯಿ ದೋಬಿಗೆ ಬಟ್ಟೆ ಕೊಡುತ್ತಿದ್ದಾಗ ಫೀಲ್ಡರನ್ನು ಕರೆದು ಬಟ್ಟೆಗಳ ಪಟ್ಟಿಯೊಂದನ್ನು ಮಾಡಲು ತಿಳಿಸಿದಳು. ತಾಯಿಯ ಆದೇಶದಂತೆ ಪಟ್ಟಿ ತಯಾರಿಸಿದ. ಬಿಡುವಿನ ಸಮಯದಲ್ಲಿ ಅದೇ ಪಟ್ಟಿಯನ್ನು ಹೊಳಪು ಮಾಡಿದ ಸುಣ್ಣಕಲ್ಲೊಂದರ ಮೇಲೆ ಗ್ರೀಸ್‌ಯುಕ್ತವಾದ ಕ್ರಯಾನ್ ಶಾಯಿಯಿಂದ ಬರೆದ. ಒಣಗಿಸಿದ ನಂತರ ನೀರನ್ನು ಸುಣ್ಣ ಕಲ್ಲಿನ ಮೇಲೆ ಹಾಕಿದ ಆಗ ನೀರು ಶಾಯಿಯಿಂದ ಬರೆದ ಭಾಗದಲ್ಲಿ ಉಳಿಯದೆ ಉಳಿದ ಭಾಗದಲ್ಲಿ ಉಳಿದುದನ್ನು ಕಂಡ, ತಕ್ಷಣ ಗ್ರೀಸ್‌ಯುಕ್ತವಾದ ಶಾಯಿಯನ್ನು




ಚಿತ್ರ 4 : W. ನೀರಿನ ಸಿಲಿಂಡರ್. I. ಶಾಯಿಯ ಸಿಲಿಂಡರ್
P. ಒತ್ತಡದ ಸಿಲಿಂಡರ್ (ಬ್ಲಾಂಕೆಟ್‌ಯುಕ್ತವಾದದ್ದು)

ಕಲ್ಲಿಗೆ ಲೇಪನ ಮಾಡಿದ, ಶಾಯಿಯು ಶಾಯಿಯಿಂದ ಬರೆದಿದ್ದ ಭಾಗದಲ್ಲಿ ಮಾತ್ರ ಲೇಪನವಾಗಿತ್ತು. ಇದನ್ನು ಗಮನಿಸಿದ ಫೀಲ್ಡರ್ ಕಲ್ಲಿನ ಮೇಲೆ ಕಾಗದವನ್ನಿಟ್ಟು ಒತ್ತಡವನ್ನು ಕೊಟ್ಟ. ಮುದ್ರಿತರೀತಿಯ ಪ್ರತಿಯನ್ನು ಪಡೆದ. ಕಲ್ಲಿನ ಮೇಲೆ ಬರೆದು ಮುದ್ರಿಸುವ ಈರೀತಿಗೆ ಲಿಥೋಗ್ರಫಿ ಎಂದು ಕರೆದ.

'ನೀರು ಮತ್ತು ಗ್ರೀಸ್ ಒಂದನ್ನೊಂದು ಬೆರೆಯಲಾರವು ಎಂಬ ಸಿದ್ಧಾಂತದ ಮೇಲೆ ಲಿಥೊಗ್ರಾಫಿ ಆಧರಿತವಾಗಿದೆ'.

ಫೀಲ್ಡರ್ ಇದೇ ತತ್ವದ ಆಧಾರದಿಂದಲೇ ಲಿಥೊಗ್ರಾಫಿಯನ್ನು ಶೋಧಗೊಳಿಸಿ, ಇದಕ್ಕೆ ರಸಾಯನಿಕ ಮುದ್ರಣ, ಎಂದು ಕರೆದ. ಇದೇ ಸಮಯದಲ್ಲಿ ಬೇರೆ ರಾಷ್ಟ್ರದ ತಜ್ಞರು ಸತುವಿನ ಫಲಕವನ್ನು ಬಳಸಿ ಅದಕ್ಕೆ ಅವರು ಜಿಂಕೋಗ್ರಫಿ ಎಂದು ಕರೆದರು.

## ಲಿಥೋಗ್ರಾಫಿಯ ಆಪ್ತಮಿತ್ರ-ಛಾಯಾಗ್ರಹಣ

ಲಿಥೋಗ್ರಫಿಯಲ್ಲಿ ಛಾಯಾಗ್ರಾಹಣದ ಪಾತ್ರ ಬಹಳ ಮಹತ್ವದ್ದು. ಛಾಯಾಗ್ರಹಣವನ್ನು ಲಿಥೋಗ್ರಫಿಯಲ್ಲಿ, ಪುನರ್ ಮುದ್ರಣ ಮಾಡಲು ಲಿಥೊ ಕಲ್ಲು, ಫಲಕಗಳ ಮೇಲೆ ಪ್ರತಿಬಿಂಬ ಮೂಡಿಸಲು, ಬಳಸಲಾಗುತ್ತದೆ.

ಮೊಟ್ಟ ಮೊದಲು ಛಾಯಾಚಿತ್ರ ಲಿಥೋಗ್ರಫಿಯನ್ನು ಪ್ಯಾರೀಸ್‌ನ ನೇತ್ರ ತಜ್ಞ ಲೆಮರ್ ಸಿಯರ್ ಪ್ರಾಯೋಗಿಕವಾಗಿ ಕಂಡುಹಿಡಿದ. ಇವನು ಹೊಳಪು ಮಾಡಿದ ಕಲ್ಲನ್ನು ತೆಗೆದುಕೊಂಡು ಈಥರ್‌ನಲ್ಲಿ ಕರಗಿಸಿದ ಬಿಚುಮನ್ ಜುಡಿಯಾ ಮಿಶ್ರಣವನ್ನು ಇದಕ್ಕೆ ಲೇಪಿಸಿದ. ಅದು ದ್ವಿತಿ ಸೂಕ್ಷ್ಮ (ಫೊಟೋಸೆನ್‌ಸಿಟಿವ್) ಆಯಿತು. ಅದಕ್ಕೆ ನೆಗೇಟಿವ್ ಒಂದನ್ನು ಸಂಪರ್ಕಿಸಿದ 15–20 ನಿಮಿಷಗಳ ಕಾಲ ಬೆಳಕಿಗೆ ಒಡ್ಡಿದ, ಪಾರದರ್ಶಕ ಭಾಗದಲ್ಲಿ ಬೆಳಕು ಹಾದು ಲೇಪನ ಗಟ್ಟಿಯಾಯಿತು. ಕಲ್ಲನ್ನು ಈಥರ್ ನಿಂದ ತೊಳೆದ ಆಗ ಅಪಾರದರ್ಶಕವಾದ ಭಾಗದಲ್ಲಿ ಲೇಪನಗೊಂಡ ಮಿಶ್ರಣ ಕರಗಿಹೋಯಿತು. ಹೀಗೆ ಪ್ರತಿಬಿಂಬ ಮೂಡಿದ ಕಲ್ಲಿನ ಮೇಲೆ ನೀರನ್ನು ಲೇಪನಮಾಡಿದ ನಂತರ ಗ್ರೀಸ್ ಯುಕ್ತವಾದ ಶಾಯಿಯನ್ನೂ ಲೇಪನಮಾಡಿದ. ನೀರು, ಪ್ರತಿಬಿಂಬವಿಲ್ಲದ ಸ್ಥಳದಲ್ಲೂ, ಶಾಯಿಯು ಪ್ರತಿಬಿಂಬವಿದ್ದ ಸ್ಥಳದಲ್ಲೂ ಲೇಪನಗೊಂಡವು. (ಲಿಥೋಗ್ರಫಿಯ ತತ್ವದಂತೆ.) ಕಲ್ಲಿನ ಮೇಲೆ ಕಾಗದವನ್ನು ಹಾಕಿ ಒತ್ತಡವನ್ನು ಕೊಟ್ಟಾಗ ಪ್ರತಿಬಿಂಬವು ಕಾಗದದ ಮೇಲೆ ಮೂಡಿತು.

ಇದಾದ ಕೆಲವು ವರ್ಷಗಳ ನಂತರ ಪೋಯಿಟವಿನ್ ಎನ್ನುವ ಮತ್ತೊಬ್ಬ ತಜ್ಞನು ತನ್ನ ಪ್ರಯೋಗದ ಮೂಲಕ ಲೆಮರ್ ಸಿಯರ್‌ನ ಈಥರ್‌ನಲ್ಲಿ ಕರಗಿಸಿದ ಬಿಚುಮನ್ ಜುಡಿಯಾದ ಮಿಶ್ರಣವನ್ನು ಪೊಟ್ಯಾಶಿಯಂ ಬೈ ಕ್ರೊಮೇಟ್ ಮತ್ತು ಆಲ್‌ಬ್ಯೂಮನ್ (ಮೊಟ್ಟೆಯ ಬಿಳಿಯಭಾಗ) ನಿಂದ ಸ್ಥಳಾಂತರಿಸಿದ. ಈ ರೀತಿ ತಯಾರಿಸಿದ ಲಿಥೋ ಕಲ್ಲು

ಗಳ ಸಹಾಯದಿಂದ ಇವನು ಮುದ್ರಣಾಲಯವೊಂದನ್ನು ತೆರೆದ. ಅಲ್ಲಿ ಲಿಥೋಕಲ್ಲೊಂದರಿಂದ 300 ಪ್ರತಿಗಳನ್ನು ತೆಗೆಯುತ್ತಿದ್ದ. ನಂತರ ಮುದ್ರಣಾಲಯವನ್ನು ಲೂಮರ್ಶಿಯರ್ ಎನ್ನುವವನಿಗೆ ಮಾರಿದ. ಅವನು ಅದೇ ಮುದ್ರಣಾಲಯದಲ್ಲಿ 700 ಪ್ರತಿಗಳನ್ನು ತೆಗೆದು ಲಿಥೊಗ್ರಾಫಿ ಇತಿಹಾಸದಲ್ಲೊಂದು ಮೈಲಿಗಲ್ಲನ್ನು ಸ್ಥಾಪಿಸಿದನು. ಆದರೂ ಯಾಂತ್ರಿಕ ಮುದ್ರಣ ಉಗಮಗೊಂಡಿರಲಿಲ್ಲ.

ತಾಂತ್ರಿಕ ಛಾಯಾಗ್ರಹಣದ ಸಮಕಾಲೀನ ವಿಷಯವೇ ಆಫ್‌ಸೆಟ್ ಮುದ್ರಣವಾದ್ದರಿಂದ ಈಗ ಆಫ್‌ಸೆಟ್ ಯಂತ್ರಗಳು ಹಿಂದಿನಿಂದ ಇದ್ದ ರೋಟರಿ ಯಂತ್ರಗಳ ಮೇಲೆ ಪ್ರಭುತ್ವ ಸಾಧಿಸತೊಡಗಿವೆ.

## ಲೋಹದ ಹಾಳೆಗಳ ಮೇಲೆ ಆಫ್‌ಸೆಟ್ ಮುದ್ರಣದ ಉಗಮ

ಕಾಗದದ ಮೇಲೆ ಮುದ್ರಿಸುವ ಆಫ್‌ಸೆಟ್ ಯಂತ್ರಗಳಿಗಿಂತ ಮೊದಲು ಲೋಹದ ಹಾಳೆಗಳ ಮೇಲೆ ಮಾತ್ರ ಮುದ್ರಿಸುವ ಯಂತ್ರಗಳಿದ್ದುವು. ಈ ಯಂತ್ರಗಳಲ್ಲಿ ಮಧ್ಯವರ್ತಿ ಸಿಲಿಂಡರ್ ಬಂದಿತ್ತು. ಅದಕ್ಕೆ ಕಾರ್ಡ್‌ಬೋರ್ಡಿನ ಹೊದಿಕೆ ಇತ್ತು. ಅದು ಲಿಥೋಕಲ್ಲಿನ ಮೇಲೆ ಇದ್ದ ಪ್ರತಿಬಿಂಬವನ್ನು ತಾನು ತೆಗೆದುಕೊಂಡು ತನ್ನಿಂದ ಲೋಹದ ಫಲಕಕ್ಕೆ ವರ್ಗಾಯಿಸುತ್ತಿತ್ತು. ಕೆಲವು ವರ್ಷಗಳ ನಂತರ ಮಧ್ಯವರ್ತಿ ಸಿಲಿಂಡರಿಗಿದ್ದ ರಟ್ಟಿನ ಹೊದಿಕೆಯನ್ನು ರಬ್ಬರ್ ಹೊದಿಕೆಯಿಂದ ಸ್ಥಳಾಂತರಿಸಲಾಯಿತು.

## ಬೆಳಕು ಕಂಡ ಕಾಗದದ ಮುದ್ರಣ

ಆಶ್ಚರ್ಯಕರ ಸಂಗತಿ ಎಂದರೆ ಆ ಕಾಲದ ಮುದ್ರಣ ಯಂತ್ರಗಳು ಕಾಗದ ಹಾಗೂ ಲೋಹದ ಹಾಳೆಗಳೆರಡರ ಮೇಲೂ ಮುದ್ರಿಸಲು ಶಕ್ಯವಾಗಿದ್ದವು. ಆದರೆ ಆ ಕಾಲದ ಮುದ್ರಣಯಂತ್ರ ಮಾಲೀಕರು ಕಾಗದದ ಮೇಲೆ ಮುದ್ರಿಸಲು ಬಿಡುತ್ತಿರಲಿಲ್ಲ. ಹೈವುಡ್ ಎನ್ನುವವನ ಒತ್ತಡಕ್ಕೆ ಮಣಿದು ಒಬ್ಬ ಆಫ್‌ಸೆಟ್ ಯಂತ್ರದ ಮಾಲೀಕನು ಕಾಗದದ ಮೇಲೆ ಮುದ್ರಿಸಲು ಒಪ್ಪಿದ. ಆ ದಿನದಿಂದ ಆಫ್‌ಸೆಟ್ ಯಂತ್ರಗಳು ಕಾಗದದ ಮೇಲೂ ಮುದ್ರಿಸಬಹುದೆಂದು ತಿಳಿಯಿತು. ಇದರಿಂದ 25 ವರ್ಷಗಳ ಮುಂಚಿತವಾಗಿಯೇ ಶೋಧಗೊಂಡಿದ್ದರೂ 25 ವರ್ಷಗಳಷ್ಟು ತಡವಾಗಿ ಕಾಗದದ ಮೇಲೆ ಮುದ್ರಿಸಬಹುದೆಂದು ಬೆಳಕಿಗೆ ಬಂದಿತು.




ಚಿತ್ರ 5: In. ಶಾಯಿಯನ್ನು ಕೊಡುವ ಸಿಲಿಂಡರ್, D. ನೀರನ್ನು ಕೊಡುವ ಸಿಲಿಂಡರ್, P. ಫಲಕ ಜೋಡಣೆ ಸಿಲಿಂಡರ್, B. ರಬ್ಬರ್ ಹೊದಿಕೆ ಸಿಲಿಂಡರ್, I. ಒತ್ತಡದ ಸಿಲಿಂಡರ್

## ಕಾಗದ ತಪ್ಪಿತು – ಮುದ್ರಣ ಸ್ಫುಟವಾಯಿತು

20ನೇ ಶತಮಾನದ ಆರಂಭ ವರ್ಷಗಳಲ್ಲಿ ರೂಪುಗೊಂಡ ಆಫ್‌ಸೆಟ್ ಸ್ಟೋನ್ ಲಿಥೋಗ್ರಫಿ ಯಂತ್ರವನ್ನು ಒಮ್ಮೆ ರೂಬೆಲ್ ಎನ್ನುವ ತಜ್ಞ ನಡೆಸುತ್ತಿದ್ದ. ಆಗ ಕಾಗದವನ್ನು ಕೊಡುವುದು ತಪ್ಪಿಹೋಯಿತು. ಆಗ ಕಾಗದದ ಮೇಲಾಗಬೇಕಾದ ಮುದ್ರಣ ಒತ್ತಡದ ಸಿಲಿಂಡರ್‌ಗೆ ಇದ್ದ ರಬ್ಬರ್ ಹೊದಿಕೆಯ ಮೇಲಾಯಿತು. ನಂತರ ಯಂತ್ರಕ್ಕೆ ಕೊಟ್ಟ ಕಾಗದದ ಎರಡೂ ಬದಿಯಲ್ಲಿ ಮುದ್ರಣವಾಯಿತು. ಕಾಗದದ ಮುಂಭಾಗದಲ್ಲಾದ ಮುದ್ರಣಕ್ಕಿಂತಲೂ ಹಿಂಬದಿಯ ಮುದ್ರಣ ಸ್ಫುಟವಾಗಿ ಗೋಚರಿಸುತ್ತಿತ್ತು. ಇದರಿಂದ ರಬ್ಬರ್ ಹೊದಿಕೆ ಇರುವ ಒಂದು ಮಧ್ಯವರ್ತಿ ಸಿಲಿಂಡರ್ ಇದ್ದರೆ ಉತ್ತಮ ಮುದ್ರಣವನ್ನು ಪಡೆಯಬಹುದೆಂದು ತಿಳಿದ–ರೂಬೆಲ್.

ಕಾಗದವು 'ಪಿ' ಸಿಲಿಂಡರ್ ಹಾಗೂ ಲಿಥೋಕಲ್ಲಿನ ಮಧ್ಯೆ ಹಾದು ಹೋಗಬೇಕಿತ್ತು




ಚಿತ್ರ 6: P. ಫಲಕ ಜೋಡಣೆ ಸಿಲಿಂಡರ್,
B. ರಬ್ಬರ್ ಹೊದಿಕೆಯ ಸಿಲಿಂಡರ್,
I. ವರ್ಗಾವಣೆಯ ಸಿಲಿಂಡರ್ ಮತ್ತು ಒತ್ತಡದ ಸಿಲಿಂಡರ್

ಆದರೆ ಕಾಗದವು ಯಂತ್ರಕ್ಕೆ ಕೊಡುವುದು ತಪ್ಪಿತಾದ್ದರಿಂದ ಮುದ್ರಣವು 'ಪಿ' ಸಿಲಿಂಡರ್‌ಗಿದ್ದ ರಬ್ಬರ್ ಹೊದಿಕೆಯಮೇಲಾಯಿತು. ಎರಡನೆಯ ಬಾರಿ ಕಾಗದವು ಹಾದು ಹೋದಾಗ 'ಪಿ' ಸಿಲಿಂಡರ್ ಹಾಗೂ ಲಿಥೋ ಕಲ್ಲು ಎರಡರಿಂದಲೂ ಕಾಗದದ ಇಬ್ಬದಿಯಲ್ಲಿ ಮುದ್ರಣವಾಯಿತು.

ಎಲ್ಲಾ ಮುದ್ರಣಕಾರರ ಹಾಗೆ ರೂಬೆಲ್ ಹಣವಂತನಾಗಿರಲಿಲ್ಲವಾದ್ದರಿಂದ ಅನೇಕ ಬೇರೆ ಬೇರೆ ಮುದ್ರಣಕಾರರೊಂದಿಗೆ ಸೇರಿಕೊಂಡು ಒಂದು ಮಂಡಳಿ ಸಿಂಡಿಕೇಟ್ ಪ್ರಾರಂಭಿಸಿದ. ಈ ಮಂಡಳಿಯಲ್ಲಿ ಹ್ಯಾರಿಸ್ ಎನ್ನುವ ಒಬ್ಬ ಮುದ್ರಣಕಾರ ಸೇರಿಕೊಂಡಿದ್ದ. ಇವನು ಮುದ್ರಣ ಯಂತ್ರವನ್ನು ನವೀಕರಿಸಿದ. ಇವನು ನವೀಕರಿಸಿದ ಮುದ್ರಣ ಯಂತ್ರದಲ್ಲಿ ಮೂರು ಸಿಲಿಂಡರ್‌ಗಳಿದ್ದವು. ಅವು.

1. ಲಿಥೋ ಫಲಕವನ್ನು ಜೋಡಿಸುವಂತಹದು.
2. ರಬ್ಬರ್ ಹೊದಿಕೆ ಇರುವ ಮಧ್ಯವರ್ತಿ ಸಿಲಿಂಡರು.
3. ಸ್ಟೈನ್‌ಲೆಸ್ ಸ್ಟೀಲ್‌ನ ಒತ್ತಡದ ಸಿಲಿಂಡರ್.

## ಕಲ್ಲಿನಿಂದ ಫಲಕಕ್ಕೆ

ಲಿಥೋಕಲ್ಲನ್ನು ಬಳಸಿ ಮುದ್ರಣಮಾಡುವ ಯಂತ್ರಗಳು ಕಣ್ಮರೆಯಾದವು. ಫಲಕಗಳನ್ನು ಬಳಸಿ ಮುದ್ರಣ ಮಾಡುವ ಯಂತ್ರಗಳು ಬೆಳಕಿಗೆ ಬಂದವು. ಇಂದು ಬಳಕೆಯಲ್ಲಿರುವ ಎಲ್ಲಾ ಆಫ್‌ಸೆಟ್ ಯಂತ್ರಗಳಲ್ಲೂ ಫಲಕಗಳನ್ನೇ ಬಳಸಲಾಗುತ್ತಿದೆ.

ಮುದ್ರಣ ಫಲಕಗಳ ಮೇಲೆ ಪ್ರತಿಬಿಂಬವನ್ನು ಮೂಡಿಸುವುದರಲ್ಲಿ ಮೂರು ವಿಧಾನಗಳು ಸಾಮಾನ್ಯವಾಗಿ ಕಾಣಬಹುದು.

1. ಸಮತಲ ಫಲಕಗಳು (ಸರ್‌ಫೇಸ್ ಪ್ಲೇಟ್ಸ್).
2. ಆಳಕೊರೆತ ಫಲಕಗಳು (ಡೆಪ್ತ್ ಪ್ಲೇಟ್ಸ್).
3. ದ್ವಿಲೋಹ ಫಲಕಗಳು (ಬೈ ಮೆಟಲ್ ಪ್ಲೇಟ್ಸ್).

ಸಮತಲ ಫಲಕಗಳ ಮೇಲೆ ಲಿಥೋ ಕಲ್ಲುಗಳಮೇಲೆ ಪ್ರತಿಬಿಂಬ ಮೂಡಿಸುವಂತೆಯೇ ಪ್ರತಿಬಿಂಬವನ್ನು ಮೂಡಿಸಬಹುದು, ಇದನ್ನು ಕಡಿಮೆ ಪ್ರತಿ, ಹಾಗೂ ಸಾಮಾನ್ಯ ಮುದ್ರಣಕ್ಕಾಗಿ ಬಳಸಲಾಗುವುದು.

ಆಳ ಕೊರೆತ ಫಲಕಗಳನ್ನು ವಿವಿಧ ರಸಾಯನಿಕ ಕ್ರಿಯೆಯಿಂದ ಮಾಡಲಾಗುತ್ತದೆ. ಇಲ್ಲಿ ಮುದ್ರಿತ ಪ್ರತಿಬಿಂಬ ಸಮತಲ ಫಲಕಗಳಂತೆಯೇ ಗ್ರೀಸ್‌ಯುಕ್ತವಾಗಿರುತ್ತದೆ.




ಚಿತ್ರ 7: ಫಲಕ ಜೋಡಣೆಯ ಸಿಲಿಂಡರ್, B. ರಬ್ಬರ್ ಹೊದಿಕೆಯ ಸಿಲಿಂಡರ್

ಇದನ್ನು ಹೆಚ್ಚುಪ್ರತಿ ಹಾಗೂ ಉತ್ತಮ ಮುದ್ರಣಕ್ಕಾಗಿ ಬಳಸಲಾಗುವುದು.

ದ್ವಿ ಲೋಹ ಫಲಕಗಳು ಎರಡು ಲೋಹಗಳಿಂದ ಕೂಡಿರುತ್ತವೆ. ಇಲ್ಲಿ ಮುದ್ರಣ ಪ್ರತಿಬಿಂಬವಿರುವ ಲೋಹ ತಾಮ್ರ + ಸತುವಿನದಾಗಿದ್ದು ಇದು ಶಾಯಿಯನ್ನು ತೆಗೆದುಕೊಳ್ಳಲು ಯೋಗ್ಯವಾಗಿದ್ದರೆ ಪ್ರತಿಬಿಂಬವಲ್ಲದ ಲೋಹ, ಅಲ್ಯೂಮಿನಿಯಂ/ಕ್ರೋಮಿಯಂ/ಸ್ಟೈನ್‌ಲೆಸ್ ಸ್ಟೀಲಿನದಾಗಿರುತ್ತದೆ. ಇದು ನೀರನ್ನು ತೆಗೆದುಕೊಳ್ಳುವಂತಹದಾಗಿದ್ದು, ಶಾಯಿಯನ್ನು ತೆಗೆದುಕೊಳ್ಳಲಾರದ್ದಾಗಿರುತ್ತದೆ.

ಸಾಮಾನ್ಯವಾಗಿ ಸಮತಲ–ಆಳ ಕೊರೆತ ಫಲಕಗಳಿಗೆ ಸತು, ಅಲ್ಯೂಮಿನಿಯಂ, ಅಥವಾ ತಾಮ್ರವನ್ನು ಬಳಸಲಾಗುತ್ತದೆ.

ಮೊದಲು ಇದ್ದ ಲಿಥೋಕಲ್ಲಿನ ಬದಲಿಗೆ ಈ ಮೇಲಿನ ಫಲಕಗಳನ್ನು ಜೋಡಿಸಿ ಮುದ್ರಣ ಮಾಡಲಾಯಿತು.

ಯಂತ್ರಕ್ಕೆ ಕಾಗದವನ್ನು ಕೈಯಿಂದ ಕೊಡುತ್ತಿದ್ದು ಅದು ಕೆಲವು ವರ್ಷಗಳ ನಂತರ ಸ್ವಯಂ ಚಾಲಿತ ಯಂತ್ರಕ್ಕೆ ಎಡೆಕೊಟ್ಟಿತು.

ಇದಾದ ನಂತರ ಬಹು ಬಣ್ಣಗಳ ಆಫ್‌ಸೆಟ್ ಯಂತ್ರಗಳು, ಒಣ ಆಫ್‌ಸೆಟ್ ಯಂತ್ರಗಳು ಮುಂತಾದವು ಬಳಕೆಗೆ ಬಂದವು. ಈಗಿನ ಆಫ್‌ಸೆಟ್ ಯಂತ್ರಗಳು ಅದ್ಭುತ ಕೌಶಲ್ಯ ಉಳ್ಳವಾಗಿವೆ.

ಈಗಿನ ಹಲವು ಆಫ್‌ಸೆಟ್ ಯಂತ್ರಗಳಲ್ಲಿನ ಸಿಲಿಂಡರುಗಳ ಜೋಡಣೆಯನ್ನು ಚಿತ್ರ 5 ರ ಸಹಾಯದಿಂದ ತಿಳಿಯಬಹುದು.

1. ಕಾಗದದ ಒಂದು ಬದಿಯಲ್ಲಿ ಮಾತ್ರ ಮುದ್ರಿಸುವ ಮುದ್ರಣ ಯಂತ್ರ.

2. ಆಧುನಿಕ ಯಂತ್ರದ ಒಂದು ಮಾದರಿಯಲ್ಲಿ (ಚಿತ್ರ-6) ಕಾಗದವನ್ನು ಒಂದೇ ಬಾರಿಗೆ ಯಂತ್ರಕ್ಕೆ ಕೊಟ್ಟಾಗ ಎರಡೂ ಕಡೆಯೂ ಮುದ್ರಿತವಾಗುತ್ತದೆ. ಇದರಲ್ಲಿ ಎರಡು ಫಲಕ ಜೋಡಣೆಯ ಹಾಗೂ ಎರಡು ರಬ್ಬರ್ ಹೊದಿಕೆಯ ಸಿಲಿಂಡರ್‌ಗಳಿರುತ್ತವೆ. ಕಾಗದವನ್ನು ಒಂದು ಕಡೆಯಿಂದ ಇನ್ನೊಂದು ಕಡೆಗೆ ವರ್ಗಾಯಿಸಲು ಒಂದು ವರ್ಗಾವಣೆಯ ಸಿಲಿಂಡರ್ ವ್ಯವಸ್ಥೆ ಇರುತ್ತದೆ.

3. ಮೇಲಿನ ಯಂತ್ರದ್ದೇ ಇನ್ನೊಂದು ರೂಪದಲ್ಲಿ (ಚಿತ್ರ-7) ವರ್ಗಾವಣೆಯ ಸಿಲಿಂಡರನ್ನು ತೆಗೆದುಹಾಕಿದ್ದು ಒಂದು ರಬ್ಬರ್ ಸಿಲಿಂಡರ್ ಇನ್ನೊಂದು ರಬ್ಬರ್ ಸಿಲಿಂಡರ್‌ಗೆ ಒತ್ತುಕೊಟ್ಟು, ಪರಸ್ಪರ ಒಂದಕ್ಕೊಂದು ಒತ್ತಡವ ಸಿಲಿಂಡರ್‌ಗಳಾಗಿ ವರ್ತಿಸುತ್ತವೆ. ಇದರಲ್ಲೂ ಎರಡೆರಡು ರಬ್ಬರ್ ಹೊದಿಕೆಯ ಹಾಗೂ ಫಲಕ ಜೋಡಣೆಯ ಸಿಲಿಂಡರುಗಳಿರುತ್ತವೆ.

ಹೀಗೆ ವಿವಿಧ ರೀತಿಯ ಯಂತ್ರಗಳು ಬಳಕೆಯಲ್ಲಿದ್ದು ಲಿಥೋಗ್ರಫಿಯ ಭೌವ್ಯತೆ ಎದ್ದು ಕಾಣತೊಡಗಿದೆ.

ಹಿಂದೆ ಉತ್ತಮ ಲಿಥೊಗ್ರಫಿಯ ತಜ್ಞನಾಗಬೇಕಾದರೆ ಅವನು ಉತ್ತಮ ಚಿತ್ರಕಾರ/ಕಲೆಗಾರನಾಗಿರಬೇಕಾಗಿತ್ತು. ಕಾರಣ ಎಲ್ಲ

(24ನೇ ಪುಟ ನೋಡಿ)

# ಪಾದಗಳ ಆರೈಕೆ

ಎನ್. ವಿಶ್ವರೂಪಾಚಾರ್

ಆರೋಗ್ಯವಂತ ವ್ಯಕ್ತಿಗಳೆಲ್ಲಾ ತಮ್ಮ ಪಾದಗಳನ್ನು ಓಡಾಡಲು ಉಪಯೋಗಿಸುತ್ತಲೇ ಇರುತ್ತಾರೆ. ನಿಂತಿದ್ದಾಗ ಅಥವಾ ನಡೆಯುವಾಗ ಪೂರ್ಣವಾದ ಶರೀರದ ತೂಕ ಪಾದಗಳ ಮೇಲಿರುತ್ತದೆ. ಪಾದಗಳನ್ನು ಸರಿಯಾಗಿ ಕಾಪಾಡಿಕೊಳ್ಳದಿದ್ದರೆ ನಾವು ಚಟುವಟಿಕೆಯಿಂದ ಪ್ರತಿನಿತ್ಯ ಕಾರ್ಯನಿರತರಾಗಿರಲು ತೊಡಕು ಉಂಟಾಗುತ್ತದೆ. ಶರೀರದ ತೂಕದ ವಿತರಣೆಯಲ್ಲೂ ವ್ಯತ್ಯಾಸವಿರುತ್ತದೆ. ಸ್ತ್ರೀಯರು, ಪುರುಷರಿಗಿಂತಲೂ ಭಿನ್ನ ರೀತಿಯಲ್ಲಿ ನಡೆಯುತ್ತಾರೆ. ಇದಕ್ಕೆ ಅವರ ಶರೀರ ರಚನೆ ಕಾರಣ.

ಪಾದಗಳಲ್ಲಿ ತೊಂದರೆ ಉಂಟಾಗಲು ಕಾರಣ, ಅವುಗಳ ಬಗ್ಗೆ ಸರಿಯಾದ ಗಮನ ಹರಿಸಿ ಆರೈಕೆ ಮಾಡದಿರುವುದು ಮತ್ತು,

(1) ಕೆಟ್ಟಭಂಗಿ.

(2) ತಪ್ಪಾದ ರೀತಿಯಲ್ಲಿ ನಡೆಯುವುದು.

(3) ಪಾದಗಳಿಗೆ ಸರಿಹೊಂದದ ಪಾದ ರಕ್ಷೆಗಳನ್ನು ಧರಿಸಿ ಓಡಾಡುವುದು.

(4) ದೀರ್ಘಕಾಲ ನಿಂತಿರುವುದು ಅಥವಾ ತಪ್ಪಾದ ಭಂಗಿಯಲ್ಲಿ ನಿಂತಿರುವುದು.

(5) ಪೌಷ್ಟಿಕ ಆಹಾರದ ಕೊರತೆ ಮೊದಲಾದವು.

ಮುಖ್ಯವಾಗಿ ಪಾದಗಳಲ್ಲಿ ತೊಂದರೆ ಉಂಟಾಗುವುದು ನಮ್ಮ ತಪ್ಪಿನಿಂದಲೇ ಅಥವಾ ಬಾಲ್ಯದಲ್ಲಿ ಮಕ್ಕಳನ್ನು ಪಾಲನೆ, ಪೋಷಣೆ ಮಾಡದಿರುವುದು ಮಕ್ಕಳ ಪಾದಗಳ ಬಗ್ಗೆ ಅಲಕ್ಷ್ಯದಿಂದಿರುವುದು.

## ತಪ್ಪಾದ ಭಂಗಿ

ಬಸ್‌ಸ್ಟಾಂಪಿನಲ್ಲಿ ದೀರ್ಘಕಾಲ ಬಸ್ಸಿಗಾಗಿ ಕಾಯುತ್ತ ನಿಂತಿರುವುದನ್ನು ನೀವು ನೋಡಿರಬಹುದು. ಅಲ್ಲದೆ, ಪಾದಗಳನ್ನು ತಪ್ಪಾದ ಭಂಗಿಯಲ್ಲಿ ಇರಿಸಿಕೊಂಡು ದೀರ್ಘಕಾಲ ನಿಂತಿರುವುದು ಸೂಕ್ತವಲ್ಲ. ಕೆಲವು ಸ್ತ್ರೀಯರು, ಹೈಹೀಲ್ಡ್ ಷೂಗಳನ್ನು ಧರಿಸಿ ಓಡಾಡುವುದರಿಂದ, ಅವರ ಪಾದಗಳಲ್ಲಿ ನೋವು ಇತ್ಯಾದಿ ತೊಡಕುಗಳು ಉಟಾಗಬಹುದು.

## ಬೆನ್ನು ಹುರಿಗೆ ಹಾನಿ

ತಪ್ಪಾದ ಭಂಗಿಯಲ್ಲಿ ದೀರ್ಘಕಾಲ ನಿಲ್ಲುವುದರಿಂದ, ದೀರ್ಘಕಾಲ ನಿಂತು ಕಷ್ಟತರವಾದ ಕೆಲಸಮಾಡುವುದರಿಂದ ಬೆನ್ನು ಹುರಿಯ ನರಗಳಲ್ಲಿ ಚುಚ್ಚುವ ಅನುಭವದ ನೋವು ಉಂಟಾಗುತ್ತದೆ. ಆದುದರಿಂದ, ದೀರ್ಘಕಾಲ ನಿಂತುಕೊಳ್ಳುವುದು ಒಳ್ಳೆಯದಲ್ಲ.

ಕ್ರಮಬದ್ಧವಾದ ಲಯಬದ್ಧವಾದ ಶಾರೀರಕ ವ್ಯಾಯಾಮ ಮಾಡುವುದರಿಂದ ಸ್ತ್ರೀ, ಪುರುಷರ ಪಾದಗಳು ಆರೋಗ್ಯವಾಗಿರುತ್ತವೆ.

## ನಮ್ಮ ನಡಿಗೆ

ನಮ್ಮ ನಡಿಗೆಯನ್ನು ಅವಲಂಬಿಸಿ ನಮ್ಮ ಪಾದಗಳಿರುತ್ತವೆ. ಸರಿಯಾದ ನಡಿಗೆಯಲ್ಲಿ ಶರೀರದ ನಮ್ಮ ತೂಕ ಪೂರ್ಣವಾಗಿ, ಸಮವಾಗಿ ಎರಡು ಪಾದಗಳಿಗೂ ವಿತರಣೆಯಾಗಿರಬೇಕು.

ಪಾಯಿಂಟೆಡ್ ಅಥವಾ ಫ್ಯಾಷನಬಲ್ ಷೂಗಳಿಗಿಂತಲೂ ಉತ್ತಮ ಚರ್ಮದ ಪಾದರಕ್ಷೆಗಳನ್ನು ಧರಿಸುವುದು ಸೂಕ್ತ. ಸಮಮಟ್ಟವಾದ ಗಡಸಾದ ನೆಲದ ಮೇಲೆ ನಡೆಯುವುದು ಒಳ್ಳೆಯದು. ಹಳ್ಳ, ದಿಣ್ಣೆಗಳ ಪ್ರದೇಶದಲ್ಲಿ ನಿಧಾನವಾಗಿ ಎಚ್ಚರಿಕೆಯಿಂದ ನಡೆಯಬೇಕು. ದೀರ್ಘಕಾಲ ನಿಲ್ಲುವುದರಿಂದ ಪಾದಗಳಿಗೆ ಹಾನಿ ಉಂಟಾಗುತ್ತದೆ. ಅಲ್ಲದೆ, ನಿಲ್ಲಲು ನೆರವಾಗುವ ಸ್ನಾಯುವಳು ಆಯಾಸಗೊಂಡು, ನೋವು ಉಂಟಾಗುತ್ತದೆ. ಮಕ್ಕಳು ತಪ್ಪು ಮಾಡಿದಾಗ ದೀರ್ಘಕಾಲ ಅವರನ್ನು ನಿಂತಿರುವಂತೆ ಶಿಕ್ಷೆ ವಿಧಿಸುವುದರಿಂದ ಮುಂದೆ ಅವರ ಪಾದಗಳಲ್ಲಿ ತೊಡಕು ಉಂಟಾಗಬಹುದು. ಅಲ್ಲದೆ, ಮಕ್ಕಳ ಪಾದರಕ್ಷೆಗಳನ್ನು ಆಗಿಂದಾಗ್ಗೆ ಬದಲಾಯಿಸುತ್ತಿರಬೇಕು.

ಮನೆಯಲ್ಲಿ, ತೋಟದ ಅಂಗಳದಲ್ಲಿ, ಬೀಚುಗಳಲ್ಲಿ, ಹುಲ್ಲಿನ ಮೇಲೆ ಬರಿಗಾಲಿನಲ್ಲಿ ನಡೆಯುವುದು ಒಳ್ಳೆಯದು. ಆಗಿಂದಾಗ್ಗೆ ಭೂಮಿಯ ಜೊತೆ, ಹಸಿರು ಹುಲ್ಲಿನ ಜೊತೆ ಸಂಪರ್ಕ ಹೊಂದುವುದರಿಂದ, ಪಾದದ ನರಗಳ ಮೇಲೆ ಉತ್ತಮ ಪರಿಣಾಮ ಉಂಟಾಗುತ್ತದೆ. ಆದರೆ, ನೆಲ, ಹುಲ್ಲು ಮೊದಲಾದ ಜಾಗಗಳಲ್ಲಿ ನಡೆದಾಡಿದ ನಂತರ ಶುದ್ಧವಾದ ನೀರಿನಲ್ಲಿ ಪಾದಗಳನ್ನು ತೊಳೆದುಕೊಳ್ಳುವುದನ್ನು ಮರೆಯಬಾರದು. ಕಾಲು ಚೀಲ ಧರಿಸುವ ಮುನ್ನ, ರಾತ್ರಿ ಮಲಗುವ ಮುನ್ನ ಪಾದಗಳನ್ನು ನೀರಿನಲ್ಲಿ ತೊಳೆದುಕೊಂಡು ಚೆನ್ನಾಗಿ ಒರಸಿಕೊಳ್ಳಬೇಕು. ರಾತ್ರಿ ಮಲಗುವ ಮುನ್ನ ತಣ್ಣೀರಿನಲ್ಲಿ ಪಾದಗಳನ್ನು ತೊಳೆಯುವುದರಿಂದ ಸುಖನಿದ್ರೆ ಲಭಿಸಲು ಅನುಕೂಲವಾಗುತ್ತದೆ.

ಪ್ರತಿನಿತ್ಯ ನಿಮ್ಮ ಕಾಲ್ಚೀಲಗಳನ್ನು ಬದಲಾಯಿಸುವುದನ್ನು ಮರೆಯದಿರಿ.

ಆಗಿಂದಾಗ್ಗೆ ಬೆಳೆದಿರುವ ಪಾದದ ಉಗುರುಗಳನ್ನು ಸರಿಯಾಗಿ ಕತ್ತರಿಸಿ ನೀಟಾಗಿ ಇಟ್ಟುಕೊಳ್ಳುವುದರಿಂದ, ಬೆರಳುಗಳಿಗೆ ಹಾನಿ ಉಂಟಾಗುವುದಿಲ್ಲ.

ಯಾವಾಗಲೂ ಚರ್ಮ (ಲೆದರ್)ದ ಪಾದರಕ್ಷೆಗಳನ್ನು ಕೊಂಡುಕೊಳ್ಳುವುದು ಒಳ್ಳೆಯದು. ಷೂಗನ್ನು ಮಧ್ಯಾಹ್ನ ಅಥವಾ ಸಂಜೆಯ ವೇಳೆ ಕೊಂಡುಕೊಳ್ಳುವುದು ಸೂಕ್ತ. ಈ ಸಮಯದಲ್ಲಿ ಷೂಗಳು ವಿಸ್ತಾರಗೊಂಡಿರುತ್ತವೆ ; ಬೆಳಗಿನ ವೇಳೆ ಅವು ಸ್ವಲ್ಪ ಸಣ್ಣದಾಗಿರುತ್ತವೆ. ನೀವು, ಬರೀ ಎರಡೇ ಪಾದಗಳನ್ನು ಪಡೆದಿರುವುದರಿಂದ, ಅವುಗಳನ್ನು 'ಸ್ನೇಹಿತರಂತೆ' ಕಂಡು, ಆರೈಕೆ ಮಾಡುವುದು ಅಗತ್ಯ.

ವಿ. ಸೂ:- ಪಾದಗಳಲ್ಲಿ ತೊಡಕು ಉಂಟಾದಾಗ, ಆರ್ಥೋಪೆಡಿಕ್ ಸರ್ಜನ್‌ರವರಲ್ಲಿ ತೋರಿಸುವುದನ್ನು ಮರೆಯಬಾರದು.

(ಆಧಾರ)

# ಮಿಶ್ರ ತಳಿ ಶಕ್ತಿ

(8ನೇ ಪುಟದಿಂದ)

(ಉತ್ತಮ)ಬೆಳೆಯನ್ನು ಬೆಳೆಯಿಸಲು ಬೆಳೆಸುವ ಮಿಶ್ರ ತಳಿ. ಹೆಚ್ಚು ಸತ್ವಶಾಲಿಯೂ, ಹೆಚ್ಚು ಫಲವತ್ತಾದವೂ (ಫರ್‌ಟೈಲ್), ಅಧಿಕ ಸಂಖ್ಯೆಯ ಆರೋಗ್ಯದಾಯಕ ಬೀಜವುಳ್ಳವೂ ಆದ ಸಸ್ಯಗಳು ಉಂಟಾಗುತ್ತವೆ.

ಇದನ್ನು ಒಂದು ನಕ್ಷೆಯ ರೂಪದಲ್ಲಿ ಚಿತ್ರದಲ್ಲಿ ಕಾಣಿಸಿರುವಂತೆ ಸೂಚಿಸಬಹುದು.

ಇದರಲ್ಲಿ ಅತ್ಯಂತ ಗಮನಾರ್ಹವಾದ ಒಂದು ಸಂಗತಿ ಎಂದರೆ ಮಿಶ್ರ ತಳಿ (ಸಂಕರ ತಳಿ) ಶಕ್ತಿ ಅಥವಾ ಸತ್ವ (ಹೈಬ್ರಿಡ್ ವಿಗರ್ ಅಥವಾ ಹೆಟರೊಸಿಸ್) ಎಂಬುದು 2ನೇ ಪೀಳಿಗೆಯ ($F_2$) ನಂತರ ಸ್ವಲ್ಪ ಕಡಿಮೆಯಾಗುತ್ತದೆ. ಮತ್ತು ಅದು ಮುಂದಿನ ಸಂತತಿಗಳಲ್ಲಿ ಹಂತ ಹಂತವಾಗಿ ಕ್ಷೀಣಿಸುತ್ತಲೇ ಹೋಗುತ್ತದೆ.

## ಜೀವ ಕೊಟ್ಟ ಹಾಲು

ಇದು ನಡೆದದ್ದು ಆಫ್ರಿಕಾದಲ್ಲಿ. ಒಬ್ಬ ವಾಹನ ಚಾಲಕ ತನ್ನ ವಾಹನವನ್ನು ನಿಲ್ಲಿಸಿ ಎತ್ತಲೋ ಹೋಗಿದ್ದ. ವಾಪಸ್ಸು ಬಂದು ವಾಹನವನ್ನೇರಬೇಕೆನ್ನುವಾಗ ವಾಹನದ ಮುಂಭಾಗದ ಗಾಜಿನ ಹತ್ತಿರ ಒಂದು ಹಾವು ಕಂಡಿತು. ಅದನ್ನು ಸರಿಸಲು ಪ್ರಯತ್ನಿಸುವಾಗ, ಆ ಹಾವು ತಕ್ಷಣವೇ ಅವನ ಕಣ್ಣಿಗೇ ವಿಷ ಉಗುಳಿತು. ಆಫ್ರಿಕಾದ ಹಾವುಗಳಿಗೆ ಈ ರೀತಿಯಲ್ಲಿ ವಿಷ ಉಗುಳುವ ಕಲೆ ಮೈಗೂಡಿದೆ. ಅಷ್ಟರಲ್ಲೇ ಅಲ್ಲಿ ಬರುತ್ತಿದ್ದ ಒಬ್ಬ ಯುವ ದಂಪತಿಗಳು ಈ ಸನ್ನಿವೇಶ ನೋಡಿದರು. ಹೆಂಗಸು ತಕ್ಷಣ ತನ್ನ ಮೊಲೆ ಹಾಲನ್ನು ತೆಗೆದು ವಾಹನ ಚಾಲಕನ ಕಣ್ಣಿಗೆ ಬಿಟ್ಟಳು. ಆಸ್ಪತ್ರೆಗೆ ಹೋದಾಗ ವಾಹನ ಚಾಲಕನಿಗೆ ವೈದ್ಯರು ಹೇಳಿದರು "ಕಣ್ಣಿಗೆ ಬಿದ್ದ ಹಾಲು ವಿಷಾಪಹಾರಿಯಾಗಿ ಕೆಲಸ ಮಾಡಿದೆ. ಇಲ್ಲದಿದ್ದರೆ ಖಂಡಿತವಾಗಿ ಕಣ್ಣು ಕುರುಡಾಗುತ್ತಿತ್ತು".

## ಕಾಲ್ದೀಪ

'ಗೆತಾ' ಎನ್ನುವುದು ಜಪಾನೀಯರ ಸಾಂಪ್ರದಾಯಿಕ ಪಾದರಕ್ಷೆ. ಇತ್ತೀಚೆಗೆ ಅನೇಕ ವರ್ತಕರು ಈ ಪಾದರಕ್ಷೆಗಳಿಗೆ ಪುಟ್ಟದಾದ ವಿದ್ಯುತ್ ದೀಪಗಳನ್ನು ಜೋಡಿಸಿ ಮಾರುತ್ತಿದ್ದಾರೆ.

## ನಿಮಗೊಂದು ಸ್ಮಾರಕ!

ನಮ್ಮ ದೇಶದ ರಾಜಾಸ್ಥಾನದ ಜೈಪುರ ಒಂದು ಪ್ರೇಕ್ಷಣೀಯ ಸ್ಥಳ. ಈ ನಗರದ ಹೊರವಲಯದಲ್ಲಿ ಒಂದು ಉದ್ಯಾನವನ. ಇಲ್ಲಿ ಯಾರು ಬೇಕಾದರೂ ತಮ್ಮ ಪ್ರೀತಿಯ ವ್ಯಕ್ತಿಯ ನೆನಪಿಗಾಗಿ ಒಂದು ಸಸಿ ನೆಡಬಹುದು, ಅಥವಾ ನೀವೊಬ್ಬ ಪ್ರವಾಸಿಯಾಗಿದ್ದರೆ ನಿಮ್ಮ ಹೆಸರಿನಲ್ಲೇ ಸಸಿ ನೆಡಬಹುದು. ನೀವು ನೆಟ್ಟ ಸಸಿಯ ಪಕ್ಕದಲ್ಲೇ ಒಂದು ಲೋಹ ಫಲಕದಲ್ಲಿ ನಿಮ್ಮ ಹೆಸರನ್ನು ಕೆತ್ತಿ ಇಡಲಾಗುವುದು. ಎಂತಹ ಒಳ್ಳೆಯ ಸ್ಮಾರಕ! ಇದೇ ವಿಧಾನವನ್ನು ಎಲ್ಲ ನಗರಗಳೂ ಅನುಸರಿಸಿದರೆ ಈ ಪ್ರಪಂಚ ಎಷ್ಟೊಂದು ಸುಂದರವಾದೀತು!




## ಎಲೆಕ್ಟ್ರಾನಿಕ್ ಪೋಲೀಸ್

ಸಿಂಗಪೂರದಲ್ಲಿ ರಸ್ತೆಗಳಲ್ಲಿ ವಾಹನ ಸಂಚಾರ ಬಹಳ. ಇದರಿಂದಾಗಿ ಪೋಲೀಸರಿಗೆ ತಲೆನೋವು. ಆದರೆ ಈಗ ವಿಜ್ಞಾನ ಪೋಲೀಸರ ನೆರವಿಗೆ ಬಂದಿದೆ. ಖಾಸಗಿ ಕಾರುಗಳಿಗೆ ವಿಶೇಷ ಎಲೆಕ್ಟ್ರಾನಿಕ್ ಉಪಕರಣವೊಂದನ್ನು ಈಗ ಜೋಡಿಸುತ್ತಾರೆ. ಅಕಸ್ಮಾತ್ ವಾಹನದ ಚಾಲಕ ಏಕಮುಖ ರಸ್ತೆಯಲ್ಲಿ ಹೋದರೆ ಕಂಪ್ಯೂಟರ್ ಲೆಕ್ಕ ಮಾಡಿಡುತ್ತದೆ ತಿಂಗಳ ಕೊನೆಯಲ್ಲಿ ಇದರಿಂದ ಪೋಲೀಸರು ಚಾಲಕನಿಗೆ 'ಮಾಸಿಕ ದಂಡ' ಎಷ್ಟೆಂದು ಹೇಳುತ್ತಾರೆ. ಎಷ್ಟು ಸುಲಭ!

## ಮೂಗಿನಲ್ಲಿ ದಿಕ್ಸೂಚಿ

ಬ್ರಿಟನ್ನಿನ ಮ್ಯಾಂಚೆಸ್ಟರ್ ವಿಶ್ವವಿದ್ಯಾನಿಲಯದ ಡಾ॥ ರಾಬಿನ್ ಬೇಕರ್ ಎಂಬ ವಿಜ್ಞಾನಿ ಮನುಷ್ಯನ ಮೂಗಿನಲ್ಲಿ ನೈಸರ್ಗಿಕ ದಿಕ್ಸೂಚಿಯಿರುತ್ತದೆಂದು ಪ್ರತಿಪಾದಿಸಿದ್ದಾರೆ. ಇದಕ್ಕಾಗಿ ಅವರು ಹೀಗೆ ಹೇಳುತ್ತಾರೆ: ''ಅಯಸ್ಕಾಂತದ ಕೆಲಸವನ್ನು ರಕ್ತದಲ್ಲಿರುವ ಕಬ್ಬಿಣದ ಅಂಶ ಮಾಡುತ್ತದೆ. ಇದನ್ನು ಉಪಯೋಗಿಸಿ ವ್ಯಕ್ತಿ ದಿಕ್ಕುಗಳನ್ನು ತಿಳಿಯಬಹುದು. ಆದರೆ ಇದು ಅಭ್ಯಾಸದಿಂದ ಬರಬೇಕು. ಆಫ್ರಿಕಾ, ಆಸ್ಟ್ರೇಲಿಯ ಖಂಡಗಳ ಮೂಲನಿವಾಸಿಗಳಿಗೆ ಮತ್ತು ಅಮೆರಿಕದ ಇಂಡಿಯನ್ನರಿಗೆ ಈ ಕಲೆ ತಿಳಿದಿದೆ.'

## ತೆಂಗಿನೆಣ್ಣೆ ಕಾರು

ಫಿಲಿಪ್ಪೈನ್ಸ್ ದೇಶದಲ್ಲಿ ತೆಂಗು ಬಹಳ ಹೆಚ್ಚು. ಪ್ರಪಂಚದ ತೆಂಗಿನ ವಸ್ತುಗಳ ಪ್ರಮಾಣದಲ್ಲಿ ಇದೊಂದೇ ದೇಶ ಶೇಕಡ 45 ರಷ್ಟನ್ನು ರಫ್ತು ಮಾಡುತ್ತಿದೆ. ಮುಖ್ಯವಾಗಿ ವಿದೇಶಗಳಲ್ಲಿ ಇದನ್ನು ಕೊಬ್ಬರಿಯಾಗಿ, ಎಣ್ಣೆಯಾಗಿ ಮತ್ತು ಸುಗಂಧ ದ್ರವ್ಯಗಳ ತಯಾರಿಕೆಯಲ್ಲಿ ಉಪಯೋಗಿಸುತ್ತಾರೆ. ಆದರೆ ಈಗ ಅಲ್ಲಿನ ವಿಜ್ಞಾನಿಗಳು ತೆಂಗಿನೆಣ್ಣೆಯನ್ನು ಕಾರುಗಳಲ್ಲಿ ಪೆಟ್ರೋಲಿಗೆ ಬದಲು ಉಪಯೋಗಿಸುವ ವಿಧಾನವನ್ನು ಕಂಡುಹಿಡಿದಿದ್ದಾರೆ. ಈಗಾಗಲೇ ಇದರ ಫಲಿತಾಂಶ ತೃಪ್ತಿಕರವಾಗಿದ್ದು, ಆ ದೇಶದ ರಾಜಧಾನಿಯಾದ ಮನಿಲಾದಲ್ಲಿ ಹಲವಾರು ಕಾರು, ಬಸ್ಸುಗಳು ತೆಂಗಿನೆಣ್ಣೆ ಕುಡಿದು ಓಡಾಡುತ್ತಿವೆ.

## ಹೆದರಿದ ಕಳ್ಳ

ಪೋರ್ತುಗಲ್‌ನ ಲಿಸ್ಬನ್ ನಗರದಲ್ಲಿ ಈ ಘಟನೆ ನಡೆಯಿತು: ಒಬ್ಬ ಕಳ್ಳ ಒಂದು ಶ್ರೀಮಂತ ಮನೆಗೆ ಕನ್ನ ಹಾಕಿದ. ಚಿನ್ನದ ಆಭರಣಗಳು, ಹಣ–ಮುಂತಾದವನ್ನಿಟ್ಟಿದ್ದ ಪೆಟ್ಟಿಗೆಯನ್ನು ಒಡೆದು ಎಲ್ಲವನ್ನೂ ದೋಚಿದ. ಆದರೆ ಅಷ್ಟರಲ್ಲೇ ಪಕ್ಕದ ಕೋಣೆಯಲ್ಲಿ ಯಾರೋ ಜನಪ್ರಿಯ ಹಾಡೊಂದನ್ನು ಸಿಳ್ಳೆಹಾಕಿ ಹಾಡಲು ಆರಂಭಿಸಿದರು. ಕಳ್ಳ ಸತ್ತೆನೋ ಕೆಟ್ಟೆನೋ ಎಂದು ಹೆದರಿ ಓಡಿದ. ಬೀದಿಯಲ್ಲಿ ಸ್ವಲ್ಪ ದೂರ ಓಡಿ ಎಡವಿಬಿದ್ದ. ಜನ ಸೇರಿದರು. ಕಳ್ಳನ ಕಾಲು ಮುರಿದಂತಾಗಿತ್ತು. ಆಂಬ್ಯುಲೆನ್ಸ್‌ಗೆ ಹೇಳಿ ಕಳಿಸಿದರು. ಅಷ್ಟರಲ್ಲೇ ಕಳ್ಳ ತಾನು ಮಾಡಿದ ಸಾಹಸ ಹೇಳಿದ. ಜನ ಆಂಬ್ಯುಲೆನ್ಸ್ ಮರೆತು, ಪೋಲೀಸರಿಗೆ ವರದಿ ಮಾಡಿದರು. ಪೋಲೀಸು ಬಂದು ಕಳ್ಳನನ್ನು ಬಂಧಿಸಿದರು. ಕೊನೆಗೆ ನೋಡಿದರೆ ಕಳ್ಳ ಕೇಳಿದ್ದ ಸಿಳ್ಳೆಯ ಹಾಡನ್ನು ಹಾಡುತ್ತಿದ್ದುದು ಆ ಕೋಣೆಯಲ್ಲಿದ್ದ ಒಂದು ಗಿಳಿ! ತನ್ನ ಒಡೆಯ ಯಾವಾಗಲೂ ಹಾಡುತ್ತಿದ್ದ ಹಾಡನ್ನು ಅನುಕರಿಸಿ ಹಾಡಿತ್ತು ಅದು!

# ಮಾಲಿನ್ಯ ನಿವಾರಣೆಗೆ ಮೋಡಗಳ ಬಳಕೆ

ಲಿಥುವಾನಿಯಾ (ಸೋವಿಯತ್ ಬಾಲ್ಟಿಕ್ ಗಣರಾಜ್ಯ) ವಿಜ್ಞಾನ ಅಕಾಡೆಮಿಯ ಭೌತ ಶಾಸ್ತ್ರ ಅಧ್ಯಯನ ಸಂಸ್ಥೆಯು ನಡೆಸುತ್ತಿರುವ ಸಂಶೋಧನೆ ಭವಿಷ್ಯದಲ್ಲಿ ಪರಿಸರ ಸಂರಕ್ಷಣೆಗೆ ಮೋಡಗಳನ್ನು ಬಳಸಿಕೊಳ್ಳುವ ವಿಧಾನಕ್ಕೆ ದಾರಿ ಮಾಡಿಕೊಡಲಿದೆ.

ಸೋವಿಯತ್ ವಿಜ್ಞಾನಿಗಳು ಬಹಳ ಸಮಯದಿಂದಲೂ ಮೋಡಗಳ ಮೇಲೆ ಕಣ್ಣಿಟ್ಟಿದ್ದಾರೆ. ಅದೇನಿದ್ದರೂ ಈ ತನಕದ ಪ್ರಯತ್ನಗಳು ಬರಿಯ ಸ್ಥಳೀಯ ಸ್ವರೂಪದವುಗಳಾಗಿದ್ದವು. ಉದಾಹರಣೆಗೆ 1980ರ ಮಾಸ್ಕೋ ಒಲಿಂಪಿಕ್ಸ್ ವೇಳೆ ಯಾಂತ್ರಿಕ ಸಾಧನಗಳ ಬಳಕೆಯ ಮೂಲಕ ಸೋವಿಯತ್ ರಾಜಧಾನಿಯ ಮೇಲಿನ ಮೋಡಗಳನ್ನು ಚದುರಿಸಲಾಯಿತು. ಕ್ರೀಡಾಪಟುಗಳು ಮತ್ತು ವೀಕ್ಷಕರಿಗೆ ಉತ್ತಮ ಹವಾಮಾನ ಕಲ್ಪಿಸಿಕೊಡುವುದಕ್ಕಾಗಿ ಅದನ್ನು ನಡೆಸಲಾಗಿತ್ತು. ಈಗಿನ ಉದ್ದೇಶ ಹಾನಿಕಾರಕ ಕೈಗಾರಿಕಾ ವಿಷವಸ್ತುಗಳಿಗೆ—ಕಶ್ಮಲಗಳಿಗೆ ಮೋಡಗಳನ್ನು "ಬಲೆ"ಗಳಾಗಿ ಬಳಸಿಕೊಳ್ಳುವುದಾಗಿದೆ.

ವಾತಾವರಣಕ್ಕೆ ಹಾನಿಕಾರಕ ವಿಷವಸ್ತುಗಳ ವಿಸರ್ಜನೆ ಜಗತ್ತಿನಾದ್ಯಂತ ಪರಿಸರ ತಜ್ಞರನ್ನು ಕಳವಳಕ್ಕೀಡುಮಾಡಿರುವ ಗಂಭೀರ ಸಮಸ್ಯೆಯಾಗಿದೆ. ವಾತಾವರಣವು ನಮ್ಮ ಭೂಮಿಯ ಅತ್ಯಂತ ದುರ್ಬಲ ಕವಚವಾಗಿದೆ. ಉತ್ತರ ಧ್ರುವದ ಮೇಲಿನ ವಾತಾವರಣದಲ್ಲಿ ವಿಸರ್ಜಿತವಾದ ವಿಷವಸ್ತುಗಳು ಭೂಮಿಯ ಪ್ರತಿ ಧ್ರುವ—ದಕ್ಷಿಣ ಧ್ರುವವನ್ನು ಮೂರು ಅಥವಾ ನಾಲ್ಕು ತಿಂಗಳ ಅಂತರದಲ್ಲಿ ತಲುಪುವುವು.

ಪರಿಸರ ನೈರ್ಮಲ್ಯದ ದೃಷ್ಟಿಯಲ್ಲಿ ಸೋವಿಯತ್ ಒಕ್ಕೂಟವು ಹೆಚ್ಚಿನ ಮಾರುಕಟ್ಟೆ ಆರ್ಥಿಕದ ರಾಷ್ಟ್ರಗಳಿಗಿಂತ ಅತ್ಯಂತ ಉತ್ತಮ ಸ್ಥಿತಿಯಲ್ಲಿದೆ. ಆದರೆ ವಾಯು ಪ್ರವಾಹಗಳು ಯಾವ ಸೀಮಾ ನಿರ್ಬಂಧಗಳನ್ನೂ ಪಾಲಿಸವು. ಸೋವಿಯತ್ ಒಕ್ಕೂಟದ ಪಶ್ಚಿಮ ಗಡಿಯಾಚೆಯಿಂದ, ಅಂದರೆ ಬಾಲ್ಟಿಕ್ ಸಮುದ್ರದ ಮೇಲಿನಿಂದ ಗಂಧಕ ಮತ್ತು ಸಾರಜನಕಯುಕ್ತ ಸಂಯುಕ್ತಗಳು ಭಾರಿ ದೊಡ್ಡ ಪ್ರಮಾಣದಲ್ಲಿ ಹಾದು ಬರುತ್ತವೆ.

ಕಶ್ಮಲ ರಹಿತ ತಾಂತ್ರಿಕತೆಗಳ ಅಭಿವೃದ್ಧಿ ವಾತಾವರಣ ಮಾಲಿನ್ಯವನ್ನು ತಗ್ಗಿಸಲಿದೆ. ಆದರೂ ಕೂಡಾ ನಿಕಟ ಭವಿಷ್ಯದಲ್ಲಿ ವಾತಾವರಣವನ್ನು ಕೈಗಾರಿಕಾ ಮಾಲಿನ್ಯಗಳಿಂದ ಸಂಪೂರ್ಣ ಮುಕ್ತವಾಗಿಸುವುದು ಅಸಾಧ್ಯ. ಲಿಥುವಾನಿಯಾದ ಭೌತವಿಜ್ಞಾನಿಗಳು ವಾತಾವರಣ ಮಾಲಿನ್ಯ ನಿವಾರಣೆಗಾಗಿ ಅಪೇಕ್ಷಿತ ದಿಕ್ಕಿಗೆ ಮೋಡಗಳನ್ನು ಚದುರಿಸುವ ಸಲುವಾಗಿ ವಿಶೇಷ ಸಾಧನ ಬಳಕೆಗೆ ಯೋಜಿಸಿದ್ದಾರೆ. ಹೀಗೆ ಮೋಡಗಳನ್ನು ವಾತಾವರಣ ಶೋಧಕಗಳಾಗಿ ಬಳಸಿಕೊಳ್ಳಬಹುದೆಂದು ವಿಜ್ಞಾನಿಗಳು ನಂಬಿದ್ದಾರೆ. ❁

# ಮಿಶ್ರ ವಿವಾಹಗಳ ವಿಶಿಷ್ಟತೆ

ಮಿಶ್ರ ವಿವಾಹಗಳ ಸಂಖ್ಯೆ ಸೋವಿಯತ್ ಒಕ್ಕೂಟದಲ್ಲಿ ಒಟ್ಟಾಗಿಯೂ – ಗಣರಾಜ್ಯವಾರಾಗಿಯೂ-ಗಮನಾರ್ಹವಾಗಿ ಹೆಚ್ಚುತ್ತಿದೆ. ಅಂತಹ ವಿವಾಹಗಳು-ಕುಟುಂಬಗಳು ವಿಭಿನ್ನ ಜನಾಂಗಗಳನ್ನು ಹೆಚ್ಚು ನಿಕಟಗೊಳಿಸುತ್ತವೆ.

ಉತ್ತರ ಕಾಕಸಸ್‌ನ ದಾಘೆಸ್ತಾನ ಸ್ವಾಯತ್ತ ಗಣರಾಜದಲ್ಲಿ ನಡೆಸಿದ ಸಮೀಕ್ಷೆಯೊಂದು ನಗರಗಳಲ್ಲಿ ಅಭಿಪ್ರಾಯ ನೀಡಿದವರಲ್ಲಿ ಶೇಕಡಾ 88ಕ್ಕೂ ಹೆಚ್ಚು ಮಂದಿ ಮತ್ತು ಗ್ರಾಮೀಣ ಪ್ರದೇಶಗಳ ಜನರಲ್ಲಿ ಶೇಕಡಾ 79 ಮಂದಿ ಗಂಡ ಅಥವಾ ಹೆಂಡತಿಯ ಆಯ್ಕೆಯಲ್ಲಿ ಜನಾಂಗದ ಪ್ರಶ್ನೆಗಿಂತ ವ್ಯಕ್ತಿಗತ ಗುಣಗಳಿಗೇ ಪ್ರಾಧಾನ್ಯ ನೀಡಿರುವ ರೆಂಬ ಅಂಶವನ್ನು ಬಹಿರಂಗಪಡಿಸಿತು.

ಮಿಶ್ರ ವಿವಾಹದಲ್ಲಿನ ಗಂಡ-ಹೆಂಡಿರ ನಡುವಣ ಸಂಬಂಧಗಳು ಸಂಪ್ರದಾಯಗಳಲ್ಲಿನ ಭಾರಿ ಅಂತರ, ಮನೋಧರ್ಮ ಮತ್ತು ನಡವಳಿಕೆಗಳಿಂದ ಪ್ರಭಾವಿತವಾಗುತ್ತವೆ. ಅದೇನಿದ್ದರೂ ಸಮೀಕ್ಷೆಗಳು ತೋರಿಸುವಂತೆ ಮನೋಧರ್ಮ, ಸ್ವಭಾವ ಮತ್ತು ಆಚಾರ ವಿಚಾರಗಳಲ್ಲಿ ಈ ಭಿನ್ನತೆಗಳು ದಾಂಪತ್ಯ ಜೀವನಕ್ಕೆ ಅಡ್ಡಿಯಾಗುವ ಬದಲು ಕುಟುಂಬ ಜೀವನ ಇನ್ನಷ್ಟು ಶ್ರೀಮಂತವಾಗಲು ಸಹಾಯಕವಾಗುತ್ತವೆ. ಅಂತಹ ಕುಟುಂಬಗಳ ನೈತಿಕ ಸ್ಥಿತಿ ಮತ್ತು ಸಮಾನತೆಯ ವಾತಾವರಣ ಮಕ್ಕಳ ಬೆಳವಣಿಗೆಯ ಮೇಲೆ ಲಾಭದಾಯಕ ಪರಿಣಾಮ ಬೀರುತ್ತದೆ.

ಮಿಶ್ರ ವಿವಾಹಗಳ ಉಗಮ ಹಾಗೂ ಅವುಗಳ ಬೆಳೆಯುತ್ತಿರುವ ಸಂಖ್ಯೆ ಕೆಲವೊಂದು ಸಾಮಾಜಿಕ ಕಠಿಣತೆಗಳು ಹಾಗೂ ಸಂಪ್ರದಾಯಗಳು ಮತ್ತು ಮನಃಶಾಸ್ತ್ರಕ್ಕೆ ಸಂಬಂಧಿಸಿದ ಕೆಲವು ಗಂಭೀರ ಸಮಸ್ಯೆಗಳನ್ನು ನಿವಾರಿಸುವ ಸಾಮರ್ಥ್ಯವನ್ನು ಅನಿವಾರ್ಯವಾಗಿ ತಂದುಕೊಟ್ಟಿದೆ. ಅಂತಹ ವಿವಾಹಗಳು ಕಠಿಣತೆಗಳನ್ನು ಮೀರಿ ನಿಲ್ಲುವಂತಹ "ಹೆಚ್ಚುವರಿ ಸಾಮರ್ಥ್ಯ" ವನ್ನು ಕೂಡಾ ಹೊಂದಿರುತ್ತವೆ. ಬೇರೊಂದು ಜನಾಂಗಕ್ಕೆ ಸೇರಿದ ಯಾರಾದರೊಬ್ಬರನ್ನು ವಿವಾಹವಾಗುವ ನಿರ್ಣಯ ಈಗ ಸಾಮಾನ್ಯ ಎನ್ನುವಂತಾಗಿದೆ. ಅಷ್ಟು ಮಾತ್ರವಲ್ಲ ಸಾಮಾನ್ಯ ವಿವಾಹಗಳಿಗಿಂತ ಹೊಣೆಗಾರಿಕೆಯ ಪ್ರಜ್ಞೆಯೂ ಇಲ್ಲಿ ಹೆಚ್ಚಿರುತ್ತದೆ. ಮಿಶ್ರ ವಿವಾಹದ ದಂಪತಿಗಳಲ್ಲಿ ಶೇಕಡಾ 92 ಮಂದಿ ಪ್ರೇಮಾನುರಾಗದ ಭಾವನೆಯೇ ಮದುವೆಯ ಪ್ರಧಾನ ಪ್ರೇರಣೆ ಎಂದಿರುವರು. ಶೇಕಡಾ ಎಂಟರಷ್ಟು ದಂಪತಿಗಳು ಭೌತಿಕ ಪರಿಗಣನೆಗೆ ಆದ್ಯತೆ ನೀಡಿದ್ದಾರೆ. ಸಾಂಪ್ರದಾಯಿಕ ಕುಟುಂಬಗಳಲ್ಲಿ ಈ ಸಂಖ್ಯೆ ಅನುಕ್ರಮವಾಗಿ ಶೇಕಡಾ 83 ಮತ್ತು ಶೇಕಡಾ 17 ಆಗಿದೆ. ❁

ಮನೋ ವೈಜ್ಞಾನಿಕ ನಾಟಕ

# ಕೃಷ್ಣಾಯಣ

ಡಾ॥ ಸಿ. ಆರ್. ಚಂದ್ರಶೇಖರ್

ಕಳೆದ ಸಂಚಿಕೆಯಲ್ಲಿ ಪ್ರಯೋಗಾರ್ಥವಾಗಿ ಪ್ರಕಟಿಸಿದ ಡಾ॥ ಸಿ. ಆರ್. ಚಂದ್ರಶೇಖರ್ ಅವರ ವೈಜ್ಞಾನಿಕ ನಾಟಕಕ್ಕೆ ಓದುಗರಿಂದ ಪ್ರತಿಕ್ರಿಯೆಗಳು ಬಂದಿದ್ದು ಒಟ್ಟಾರೆ ಸ್ವಾಗತ ದೊರೆತಿವೆ. ಅವುಗಳಲ್ಲಿ ಎರಡು ಪತ್ರಗಳನ್ನು ಇಲ್ಲಿ ಪ್ರಕಟಿಸುತ್ತೇವೆ. ಜೊತೆಗೆ ಈ ಸಂಚಿಕೆಯಲ್ಲಿ ಮತ್ತೊಂದು ವೈಜ್ಞಾನಿಕ ನಾಟಕವನ್ನೂ ಪ್ರಕಟಿಸುತ್ತಿದ್ದೇವೆ. ಎಂದಿನಂತೆ ಓದುಗರಿಗೆ ಇದು ಹಿಂದಿನ ನಾಟಕದಂತೆ ಮೆಚ್ಚಿಕೆಯಾಗಬಹುದೆಂದು ನಮ್ಮ ನಂಬಿಕೆ. ಪ್ರತಿಕ್ರಿಯೆಗಳಿಗೆ ಸ್ವಾಗತ.

—ಸಂಪಾದಕ

ಮಾನ್ಯರೆ,

ಜನವರಿ ತಿಂಗಳ ಜನಪ್ರಿಯ ವಿಜ್ಞಾನ ಮಾಸಪತ್ರಿಕೆಯಲ್ಲಿ ನೀವು ಪ್ರಕಟಿಸಿದ ಡಾ. ಸಿ. ಆರ್. ಚಂದ್ರಶೇಖರ್ ಅವರ ಮನೋ ವೈಜ್ಞಾನಿಕ ನಾಟಕವು ಚೆನ್ನಾಗಿ ಮೂಡಿ ಬಂದಿದೆ. ಇದನ್ನು ಎಲ್ಲರೂ ಓದುವಂಥ ನಾಟಕವಾಗಿದೆ. ಕಡೆಗೆ ಜನರು ನಿಮ್ಮ ಜನಪ್ರಿಯ ವಿಜ್ಞಾನದ ಡಾ॥ ಸಿ. ಆರ್. ಚಂದ್ರಶೇಖರ್ ಅವರ ಮನೋವೈಜ್ಞಾನಿಕ ನಾಟಕವನ್ನು ಓದಿ ತಮ್ಮ ಮೂಢನಂಬಿಕೆಗಳನ್ನು ದೂರ ಮಾಡಿಕೊಳ್ಳಬೇಕೆಂದು ಆಶಿಸುತ್ತೇನೆ.

ಜಿ. ದಿಲೀಪಕುಮಾರ

* * *

ಲೇಖಕರ ಈ ನಾಟಕ ರಸವತ್ತಾಗಿದೆ ಯಾದರೂ ದೇವರು, ದೆವ್ವ ಇಲ್ಲ ವೆಂಬುದಕ್ಕೆ ಆಧಾರ ಯಾವುದೂ ಇಲ್ಲ. ಎಲ್ಲವೂ ಮಾನವನ ಮನಸ್ಸೇ ಎಂಬುದಾದರೆ ಮಾನವನು ತನ್ನ ಸಾವಿನ ಬಗ್ಗೆ ಯಾಕೆ ಏನನ್ನೂ ಹೇಳಲಾಗುವುದಿಲ್ಲ? ಮಾನವನ ಮನಸ್ಸು ಎಷ್ಟು ದುರ್ಬಲವೆಂದರೆ ತನ್ನ ಮುಂದಿನ ಜೀವನವನ್ನು ಸರಿಯಾಗಿ ನಿರ್ಣಯಿಸಲು ಕೆಲವು ಸನ್ನಿವೇಶಗಳಲ್ಲಿ ಆಗುವುದಿಲ್ಲ. ತನ್ನನ್ನು ತಾನೇ ಸರಿಯಾಗಿ ಅರ್ಥಮಾಡಿಕೊಳ್ಳದ ಮಾನವ-ಮಾನವಾತೀತ ಶಕ್ತಿಯೇ ಇಲ್ಲವೆಂದು ಹೇಳಲು ಹೇಗೆ ಸಾಧ್ಯ? ಮಾನವ ತನ್ನ ಆಚಾರ, ಸಂಪ್ರದಾಯಗಳನ್ನು ಬದಲಾಯಿಸಬೇಕು ಎಂದು ಲೇಖಕರು ತಿಳಿಸಬಹುದಾಗಿತ್ತು. ಅವರ ಈ ಪೀಠಿಕೆ ನಿಜವಾಗಿಯೂ ಅರ್ಥಹೀನವಾಗಿದೆ.

ಪ್ರೇಮಲತ ಸಿ ಎನ್.

* *

ವಿ. ಸೂ : ನಾಟಕದ ಪೀಠಿಕೆ ಲೇಖಕನದ್ದಲ್ಲ. ಅದನ್ನು ಸಂಪಾದಕರು ಬರೆದದ್ದು.

ಇಂಥ ಅಭಿಪ್ರಾಯಗಳಿಗೆ ಇಂಥ ಪ್ರತಿಕ್ರಿಯೆ ಇದ್ದೇ ಇರುತ್ತವೆ. ಆದರೆ ವೈಚಾರಿಕತೆ ಹೆಚ್ಚಿದಂತೆ ಜನ ಹೆಚ್ಚು ವಿಚಾರವರರಾಗುತ್ತಾರೆ. ಹಾಗಾದಾಗ ಯಾವುದು ಸತ್ಯ ಯಾವುದು ಮಿಥ್ಯ ಎಂಬುದನ್ನು ತಿಳಿದುಕೊಳ್ಳುತ್ತಾರೆಂದು ಪ್ರೇಮಲತ ಅವರಿಗೆ ತಿಳಿಸಬಯಸುತ್ತೇನೆ

—ಸಂಪಾದಕ

## ದೃಶ್ಯ 1

ತೆರೆ ಏಳುತ್ತಿದ್ದಂತೆ ಮನೋರೋಗಿ ಕೃಷ್ಣನ ಬಂಧುಗಳು ದೇವರಿಂದ ನಿಮಿತ್ತ ಕೇಳಿ, ಅವನು ಸರಿಹೋಗಲು ಏನು ಮಾಡಬೇಕೆಂದು ತಿಳಿಯಲು ದೇವಸ್ಥಾನದಲ್ಲಿ ಸೇರಿದ್ದಾರೆ. ಯಾವುದಾದರೂ ಒಂದು ದೇವತೆಯ ಮೂರ್ತಿ (ವೀರಭದ್ರ, ಚಾಡಿ ಅಥವಾ ಮಾರಿ) ಯಥೇಚ್ಛ ಅರಿಶಿನ

ಕುಂಕುಮ ಹೂವುಗಳಿಂದ ಅಲಂಕೃತವಾಗಿದೆ. ದೀಪ, ಧೂಪಗಳಿವೆ. ರಂಗದ ಮಧ್ಯೆ ಪೂಜಾರಿ ಬನುಮ ಕೈಯಲ್ಲಿ ತ್ರಿಶೂಲ ಹಿಡಿದು ನಿಂತಿದ್ದಾನೆ. ದಾಸರಂತೆ ಕೆಂಪು ವಸ್ತ್ರವನ್ನು ತಲೆಗೆ ಪೇಟ ಕಟ್ಟಿ ಬೆನ್ನ ಹಿಂದೆ ಇಳಿಬಿಟ್ಟಿದ್ದಾನೆ. ಕಾಲಿಗೆ ಗೆಜ್ಜೆ, ನಡುವಿಗೆ ಕತ್ತಿ ಕಟ್ಟಿದ್ದಾನೆ. ಮೆಲ್ಲಮೆಲ್ಲಗೆ ಹೆಜ್ಜೆ ಎತ್ತಿ ಇಡುತ್ತಾ, ಸಣ್ಣಗೆ ಶರೀರವನ್ನು ನಡುಗಿಸುತ್ತಿದ್ದಾನೆ. ಅವನ ಪಕ್ಕದಲ್ಲಿ ಅವನ ಸಹಾಯಕ ತಿಪ್ಪ ತಟ್ಟೆಯ ತುಂಬ ಕುಂಕುಮ, ವಿಭೂತಿ ಪುಡಿಗಳನ್ನು ಇಟ್ಟುಕೊಂಡು ನಿಂತಿದ್ದಾನೆ. ಒಂದು ಪಕ್ಕದಲ್ಲಿ ಕೃಷ್ಣನನ್ನು ಎರಡೂ ಪಕ್ಕದಲ್ಲಿ ಹಿಡಿದು ನಿಂತ ಅವನ ಬಂಧುಗಳು (ಯಾಲಕ್ಕಿ ಮತ್ತಿತರರು) ನಿಂತಿದ್ದರೆ, ಮತ್ತೊಂದೆಡೆ ನಾಲ್ಕೈದು ಹಳ್ಳಿಯ ಭಕ್ತರು, ಅರ್ಥಿಗಳೂ ನಿಂತಿದ್ದಾರೆ. ಕ್ರಮೇಣ ಬನುಮನ ನಡುಗುವಿಕೆ ಹೆಚ್ಚಾಗಿ, ಹೆಜ್ಜೆ ಎತ್ತಿ ಎತ್ತಿ ಹಾಕುತ್ತಾ ಹೂಂಕರಿಸುತ್ತಾನೆ. ಯಾಲಕ್ಕಿ ಭಯದಿಂದ ನಡುಗುತ್ತಾನೆ. ಎಲ್ಲರೂ ಭಕ್ತಿಯಿಂದ ತಲೆ ಬಾಗಿ ನಮಿಸುತ್ತಾರೆ. ಬನುಮ ಒಂದು ಚಿಟಿಕೆ ಕುಂಕುಮ ವಿಭೂತಿಯನ್ನು ತೆಗೆದು ಉಫ್ ಎಂದು ಊದಿ ವೀರಭದ್ರಾ ಎಂದು ಕಿರಿಚುತ್ತಾನೆ. ಓಡಿಹೋಗಲು ಯತ್ನಿಸುವ ಕೃಷ್ಣನನ್ನು ತಡೆದು ದೈವ ಬಂತು ದೈವ ಬಂತು ಎಂದು ಎಲ್ಲರೂ ಪಿಸುಗುಟ್ಟುತ್ತಾರೆ.

ಬನುಮ : ಭಕ್ತಾ, ನನ್ನನ್ನು ಕರೆಸಿದ್ದೇಕೆ? ನನ್ನಿಂದೇನಾಗಬೇಕು?

ತಿಪ್ಪ : ಏ, ಯಾಲಕ್ಕಿ ಮುಂದಕ್ಕೆ ಕರಕೊಂಡು ಬಾರ್ಲಾ... (ಬನುಮನ ಕಡೆ ತಿರುಗಿ) ಇವರು ನಿಮಿತ್ತ ಕೇಳಕ್ಕೆ ಬಂದವ್ರೆ ನನ್ನಪ್ಪ.

ಮಾಲಯ್ಯ : ಅಡ್ಡಬಿದ್ದೆ ನನ್ನಪ್ಪ. (ಸಾಷ್ಟಾಂಗ ನಮಸ್ಕಾರ ಮಾಡುವನು) ನಮ್ ಕೃಷ್ಣನಿಗೆ ಏನಾಗದೆ ಹೇಳಪ್ಪಾ... (ಎಂದು ಕೈಮುಗಿದು ನಿಲ್ಲುವನು )

ಕೃಷ್ಣ : (ಬನುಮನನ್ನು ನೋಡಿ ಹಲ್ಲು ಕಿರಿದು) ಕತ್ತೀ... ನನಗೆ ಬೇಕು... (ಎಂದು ಅದನ್ನು ತೆಗೆದುಕೊಳ್ಳಲು ಮುಂದೆ ಹೋಗುವನು. ಉಳಿದವರು ಅವನನ್ನು ಹಿಂದಕ್ಕೆ ಎಳೆಯುವರು. ಬನುಮ ಒಂದು ಹೆಜ್ಜೆ ಹಿಂದಕ್ಕೆ ಹೋಗಿ ಕತ್ತಿಯನ್ನು ಸವರುವನು. ಜೋರಾಗಿ ಹೂಂಕರಿಸುವನು.)

ತಿಪ್ಪ : ಕೃಷ್ಣ ಹುಚ್ಚುಚ್ಚಾಗಿ ಆಡ್ತನೆ. ತಲೆ ಲೂಜು. ಯಾಕೆ ಅಂತ ಕೇಳ್ತಾವರೆ ನನ್ನಪ್ಪ.

(ಯಾಲಕ್ಕಿ ಸಂಜ್ಞೆಮಾಡಿ ನಿನಗೆ ತಲೆ ಸರಿಯಿಲ್ಲ ಎಂದು ಕೃಷ್ಣನನ್ನು ಪರಿಹಾಸ್ಯ ಮಾಡುತ್ತಾನೆ. ಕೃಷ್ಣ ಅವನನ್ನು ಹೊಡೆಯಲು ಯತ್ನಿಸುವನು. ಉಳಿದವರು ಅವನನ್ನು ಬಿಗಿಯಾಗಿ ಹಿಡಿದುಕೊಳ್ಳುವರು.)

ಬನುಮ : ಹರಕೆ, ಕಾಣಿಕೆ... ನನ್ನ ಹರಕೆ ಸಂದಾಯವಾಗಿಲ್ಲ ಯಾಕೆ? (ಚಿಟಿಕೆ ವಿಭೂತಿ ತೆಗೆದು ಉಫ್ ಎಂದು ಊದುವನು.)

ತಿಪ್ಪ : ಏನ್ಲೇ ಮಾರ... ಯಾಕೋ... ದೇವ್ರು ಕಾಣಿಕೆ ತೀರ್ಸಿಲ್ಲ? ದೇವ್ರಿಗೆ ಕೋಪ ಬಂದರೆ ನಿನ್ನ್ ಗತಿ ಮುಗಿದೋಯ್ತದೆ, ಉಸಾರು.

ಮಾರಯ್ಯ : ತಪ್ಪಾಯ್ತು ನನ್ನಪ್ಪ. ಈ ಸಲ ಮಳೆ ಬೆಳೆ ಆಗ್ದೆ, ಕೈಲಿ ಕಾಸಿಲ್ದೆ ಅರಕೆ ಒಪ್ಸೋದಕ್ಕೆ ಆಗಲಿಲ್ಲ. ಅರಕೆ ಕಂಡಿತ ಒಪ್ಸಿಸ್‌ತೀವಿ.

ತಿಪ್ಪ : ಇನ್ನೊಂದು ವಾರ್ದಾಗೆ ನಿನ್ನ ಅರಕೆ ಬಾಬತ್ತು ಕುರಿ, ತಡ ಆಗಿದ್ದಕ್ಕೆ ದಂಡದ ಬಾಬ್ತು ಅತ್ತು ರೂಪಾಯಿ ತಂದು ಮಡಗ್‌ಬೇಕು ಅಂತ ದೈವದ ಅಪ್ಣೆ ..ತಿಳೀತೇನೋ?

ಮಾರಯ್ಯ : ಆಯ್ತು ನನ್ನಪ್ಪ... ನಮ್ ಕೃಷ್ಣನ ವಿಸ್ಯಾ...

(ತಿಪ್ಪ ಬನುಮನ ಕಿವಿಯಲ್ಲಿ ಏನೋ ಹೇಳುವನು. ಬನುಮ ಹೂಂಕರಿಸುತ್ತಾ, ಮುಂದೆ ಬಂದು ಕೃಷ್ಣನ ಮುಂದೆ ನಿಲ್ಲುವನು. ಅವನತ್ತ ಒಂದಷ್ಟು ವಿಭೂತಿ, ಕುಂಕುಮವನ್ನು ಎರಚುತ್ತಾನೆ).

ಬನುಮ : ನೀಚ ದೆವ್ವವೇ, ಇವನನ್ನು ಬಿಟ್ಟು ತೊಲಗು... ಇನ್ನೊಂದು ವಾರದಲ್ಲಿ ಇವನು ಸರಿಯಾಗುವನು. (ಹಿಂದೆ ಸರಿದು ಕುಣಿಯಲಾರಂಭಿಸುವನು. ಕುಂಕುಮವನ್ನು ಮುಖಕ್ಕೆ ಬಳಿದುಕೊಂಡು ವೀರಭದ್ರಾ ಎಂದು ಕಿರಿಚುವನು. ಉಳಿದವರೆಲ್ಲರೂ ಬಗ್ಗಿ ನಮಸ್ಕರಿಸುತ್ತಿರುವಂತೆ ತೆರೆ ಬೀಳುವುದು.

## ದೃಶ್ಯ–2

(ಹಿನ್ನೆಲೆಯಲ್ಲಿ ಹುಡುಗರ ಗದ್ದಲ, ನಗು. ಹುಚ್ಚ... ಲೇ ಹುಚ್ಚ... ತಿಕ್ಲ ಕ್ರಿಷ್ಣ, ಹುಚ್ಚು ಕ್ರಿಷ್ಣ... ಹೋ ಹೋ... ಎಂಬ ಗಲಾಟೆ ಕೇಳಿ ಬರುವುದು. ಹರಕಲು, ಕೊಳಕು ಅಂಗಿ ಪಂಚೆ ತೊಟ್ಟ ಕ್ರಿಷ್ಣ ತನ್ನಷ್ಟಕ್ಕೆ ತಾನೇ ಮಾತಾಡಿಕೊಳ್ಳುತ್ತಾ, ನಗುತ್ತಾ, ಮಧ್ಯೆ ಮಧ್ಯೆ ಗಂಗೀ... ಗಂಗೀಗೂ ನಂಗೂ ಮದುವೆ ನಡೆಯಾಕಿಲ್ಲಾ... ಗಂಗೀನಾ ಎತ್ಕೊಂಡು ಒಂಟೋದ್ರೂ... ಅವರು ಸಿಕ್ಲಿ ಮಾಡ್ತೀನಿ... ಲೇ ಕೆಂಚುಟಗ ನಿನ್ನ ಕತ್ತು

ಹಿಚುಕಿಬಿಡ್ತೀನಿ... ನನ್ ಗಂಗೀ... ಎನ್ನುವ ಮಾತುಗಳು ಕೇಳಿಸುತ್ತವೆ.)

ಹುಡುಗರ ಹಿಂಡು ಹುಚ್ಚ... ಹುಚ್ಚ ಎಂದು ಕೂಗುತ್ತಾ ಬರುವುದು. ಕೃಷ್ಣ ಅವರನ್ನು ನೋಡುತ್ತಾ, ನಗುತ್ತಾ ನಿಲ್ಲುವನು. ಅವರೆಲ್ಲ ಅವನ ಸುತ್ತ ಕುಣಿಯುತ್ತಾ, ತಿಕ್ಲ ಕೃಷ್ಣ... ಹುಚ್ಚು ಕೃಷ್ಣ ಎನ್ನುವರು. ಅವರ ಜೊತೆ ಕೃಷ್ಣನೂ ಕುಣಿಯುವನು.

ಒಂದು ಕಡೆಯಿಂದ ಕೆಂಚುಟಿಗ, ಯಾಲಕ್ಕಿ ಪ್ರವೇಶಿಸುವರು. ಕೆಂಚುಟಿಗ ಮೈಕೈ ತುಂಬಿಕೊಂಡು ಶೋಕಿ ಮಾಡುವ ಹಳ್ಳಿಗ. ಗಿರಿಜಾ ಮೀಸೆ, ಬೆಳ್ಳಗೆ ಕಾಣಲು ಮುಖಕ್ಕೆ ಪೌಡರ್, ಬೆರಳಿಗೆ ಉಂಗುರ, ಜಿರ್ ಜಿರ್ ಎಂದು ಶಬ್ದ ಮಾಡುವ ಚಡಾವು ಹಾಕಿಕೊಂಡಿದ್ದಾನೆ. ಬುದ್ಧಿವಂತನಲ್ಲ. ಆದರೆ ಬುದ್ಧಿವಂತನೆಂಬ ಪೊಗರಿದೆ. ಯಾಲಕ್ಕಿ ನರಪೇತಲ, ಮುಗ್ಧ, ಸಾಕಷ್ಟು ಪೆದ್ದ. ಕೆಂಚುಟಿಗನ ಆರಾಧಕ.

ಕುಣಿಯುತ್ತಿರುವ ಕೃಷ್ಣನನ್ನು, ಮಕ್ಕಳನ್ನು ನೋಡಿ, ಇವರೂ ನಗುತ್ತಾ ನಿಲ್ಲುವರು.

ಕೆಂಚುಟಿಗ : ಯಾಲಕ್ಕಿ, ಈ ಕೃಷ್ಣನನ್ನು ನನ್ನ ದೊಡ್ಡಪ್ಪನ ಮಗ ಅಂತ ಯೋಳ್ಕೊಳಕ್ಕೆ ನನ್ಗೆ ನಾಚ್ಗೆ ಆಯ್ತದೆ ನೋಡು.

ಯಾಲಕ್ಕಿ : ಕ್ರಿಷ್ಣನಿಗೆ ದೆವ್ವದ ಕಾಟ ಅಂತ ವಾದ ತಿಂಗಳು ದ್ಯಾವ್ರು ಏಳ್ತು ಕಣಣ್ಣ.

ಕಂಚುಟಿಗ : ಏ...ದೆವ್ವವೂ ಇಲ್ಲ ಬೂತವೂ ಇಲ್ಲ ಕಣ್ಲೇ... ಅವನಿಗೆ ಮಿದ್ಲೆ ಕೆಟ್ಹೋಗದೆ. ಅದ್ಕೇ ಅವನು ಇಂಗಾದದೂ.

ಯಾಲಕ್ಕಿ : ಮಿದ್ಲೆ ? ಅದೆಂತದು? ಅಂಗಂದ್ರೆ ಏನಣ್ಣ ?

ಕೆಂಚುಟಿಗ : ಥೂ ನನ್ಮಗನೆ, ಮಿದ್ಲೆ ಅಂದ್ರೆ ಗೊತ್ತಿಲ್ವಾ? (ಯಾಲಕ್ಕಿಯ ತಲೆ ಕಡೆ ಬೆರಳಿಟ್ಟು) ಮಿದ್ಲೆ ತಲೆ ಒಳಗೆ...ನಿನ್ನ ತಲೆ ಒಳಗೆ ಅದಿಲ್ಲ ಬಿಡು... (ಬೆರಳನ್ನು ತನ್ನ ತಲೆಗಿಟ್ಟುಕೊಂಡು) ಇದರ ಒಳಗೆ ಇರ್ತದೆ. ಅದು ಕೆಟ್ಟು ಓದರೆ ಜನ ಹುಚ್ಚರಾಗ್ತಾರೆ.

ಯಾಲಕ್ಕಿ : ಅಂದ್ರೆ ನನಗೆ ಹುಚ್ಚು ಬರೋಲ್ಲ ಅಂತಾಯ್ತು ಅಲ್ವೇನಣ್ಣ. ನನ್ನ ತಲೆ ಒಳಗೆ ಮಿದ್ಲೆ ಇಲ್ಲ. ಮಿದ್ಲೇನೇ ಇಲ್ಲದೆ ವ್ಯಾಕೆ ಕೆಟ್ಹೋಗೋ ಮಾತೇ ಇಲ್ಲ.

ಹುಡುಗರ ಗದ್ದಲ ಜಾಸ್ತಿಯಾಗುತ್ತದೆ. ಅದನ್ನು ಸಹಿಸಲಾಗದೆ—

ಕೆಂಚುಟಿಗ : ಥತ್ ನನ್ನ ಮಕ್ಕಳಿರಾ. ಯಾಕ್ರಲೇ ತಿಂದ ಹೆಚ್ಚಾತಾ? ಅವನ್ಯಾಕೆ ಗೋಳು ಹೊಯ್ಕ ತ್ತೀರಾ? ಹಾಕ್ತೀನ್ ನೋಡು.

ಎಂದು ಮಕ್ಕಳನ್ನು ಓಡಿಸುವನು. ಯಾಲಕ್ಕಿಯೂ ನಡೀರೋ ಎಂದು ಓಡಿಸುವನು. ಕೃಷ್ಣ ಇವರಿಬ್ಬರನ್ನು ನೋಡುತ್ತಾ ನಿಲ್ಲುವನು. ಅವನ ನಗು ಮಾಯವಾಗಿ, ಮುಖ ಗಂಭೀರವಾಗಿ, ಅವರನ್ನು ದುರುಗುಟ್ಟುತ್ತಾ ನೋಡುವನು.

ಕೆಂಚುಟಿಗ : ಏನ್ಲಾ ಕ್ರಿಷ್ಣ... ಎಂಗಿದ್ದೀಯೋ...? ನಿನ್ನ ನೋಡೋಕೆ ಎರ್ಡು ಕಣ್ಣು ಸಾಲ್ದಲ್ಲೋ.

ಕೃಷ್ಣ ದುರುಗುಟ್ಟಿ ನೋಡುವನೇ ವಿನಃ ಮಾತಾಡುವುದಿಲ್ಲ.

ಯಾಲಕ್ಕಿ : ಮಾತಾಡೋ ಕ್ರಿಷ್ಣ. ಅಣ್ಣಾವ್ರು ಬೋ ಪ್ರೀತಿಯಿಂದ ಕೇಳ್ತಾವ್ರೆ.

ಕೃಷ್ಣ ಮಿಂಚಿನ ವೇಗದಲ್ಲಿ ಜೇಬಿನಿಂದ ಚಾಕು ತೆಗದು—

ಕೃಷ್ಣ : ಲೇ ಕೆಂಚುಟಿಗಾ, ಇವತ್ ನಿನ್ನ ಕತೆ ಮುಗಿಸ್ತೀನಿ. ನಿನ್ನ ಕತ್ ಕತ್ತರಿಸ್ತೀನಿ (...ಎಂದು ಆರ್ಭಟಿಸುವನು. ಅವನ ಈ ದಿಢೀರ್ ವರ್ತನೆಯಿಂದ ಬೆಚ್ಚಿದ ಕೆಂಚುಟಿಗ ಯಾಲಕ್ಕಿಯರು ಹಿಂದಿಂದಕ್ಕೆ ಓಡಲು ಪ್ರಯತ್ನಿಸುವರು).

ಕೃಷ್ಣ : ಒಂದೆಜ್ಜೆ ಹಿಂದಕ್ಕೆ ಮುಂದಕ್ಕೆ ಇಟ್ರೋ ನಿಮ್ಮನ್ನು ಇಲ್ಲಾ ಅನ್ನಿಸ್ಬಿಡ್ತೀನಿ.

(ಯಾಲಕ್ಕಿ, ಕೆಂಚುಟಿಗ ಗಕ್ಕನೆ ನಿಲ್ಲುವರು.)

ನಾನು ಮದ್ವೆ ಆಗ್ಬೇಕಿದ್ದ ಗಂಗೀನ ಎತ್ಕೊಂಡೋದೆ. ನನ್ನ ಜೈಲಿಗೆ ಕಳಿಸ್ದೆ. ಈ ಹೊತ್ತು, ನಿನ್ನ ಯಮುನ ಪಟ್ಣಕ್ಕೆ ಕಳಿಸ್ತೀನಿ. ಹ...ಹ್ಹಾ... (ಎಂದು ನಗುವನು)

ಕೆಂಚುಟಿಗ : ಯಾ–ಯಾಲಕ್ಕೀ ಕೂತ್ಕೊಳೋ. ಯಾರ್ನಾದರೂ ಕರೆಯೋ. ಹುಚ್ಚನನ್ಮಗ. ಏನ್ಮಾಡ್ತಾನೋ ಹೇಳಾಕ್ಕಾಗೋಲ್ಲ...

ಯಾಲಕ್ಕಿ : (ಭಯದಿಂದ ಮಾತನಾಡಲಾಗದೆ, ಮಾತನಾಡಲಾಗುವುದಿಲ್ಲ ಎಂದು ಸನ್ನೆ ಮಾಡುವನು. ಬಳಿಕ ಬಾಯಿ ಬಡಿದುಕೊಳ್ಳಲು ಪ್ರಾರಂಭಿಸುವನು. ಹೋ ಎಂದು ಅಳುವನು).

ಈ ಸಮಯಕ್ಕೆ ನಾಲ್ಕು ಮಂದಿ ಹಳ್ಳಿಗರು ಪ್ರವೇಶಿಸುವರು. ಯಾಲಕ್ಕಿ ಓಡಿ ಅವರ ಹಿಂದೆ ನಿಲ್ಲುವನು. ಎಲ್ಲರಿಗೂ ಏನು ಮಾಡಲೂ ತೋಚುವುದಿಲ್ಲ. ಕೃಷ್ಣ ಎಲ್ಲರನ್ನು ಹೆದರಿಸುತ್ತಾ

ನಿಲ್ಲುವನು. ಉಳಿದವರು ಅವನನ್ನು ಹಿಡಿಯಲು ಮುಂದೆ ಬರುವರು, ಹೆದರಿ ಹಿಂದೆ ಸರಿಯುವರು. ಕೊನೆಗೆ ಒಬ್ಬ ತಾನು ಹೊದ್ದಿದ್ದ ದುಪ್ಪಟಿಯನ್ನು ತೆಗೆದು ಇಬ್ಬರ ಸಹಾಯದಿಂದ ಸರಕ್ಕನೆ ಕೃಷ್ಣನನ್ನು ಅದರಿಂದ ಕಟ್ಟಿ ಬಂಧಿಸುವರು.

ಯಾಲಕ್ಕಿ : (ದೂರದಲ್ಲೇ ನಿಂತು) ಕಟ್ಟಿ...ಬಿಗಿಯಾಗಿ ಕಟ್ಟಿ ಎನ್ನುತ್ತಿದ್ದಂತೆ ತೆರೆ ಬೀಳುವುದು.

## ದೃಶ್ಯ 3

ಆಸ್ಪತ್ರೆ. ಎರಡು ಕುರ್ಚಿ, ಒಂದು ಟೇಬಲ್ ಹೊರ ರೋಗಿ ವಿಭಾಗ ಎಂಬ ನಾಮ ಫಲಕ. ಮಾರಯ್ಯ, ಇಬ್ಬರು ಹಳ್ಳಿಯವರು ಕೃಷ್ಣನನ್ನು ಕೈಕಟ್ಟಿ ಎಳೆದು ತರುವರು. ಕೃಷ್ಣ ಪ್ರತಿಭಟಿಸುತ್ತಿರುತ್ತಾನೆ. ಡಾಕ್ಟರ್ ಮತ್ತು ನರ್ಸ್‌ಗಳು ಪ್ರವೇಶಿಸುತ್ತಾರೆ. ಕೃಷ್ಣನನ್ನು ಕಂಡು ಅವನ ಕಟ್ಟುಗಳನ್ನು ಬಿಚ್ಚಲು ಪ್ರಾರಂಭಿಸುತ್ತಾರೆ.

ಡಾಕ್ಟರ್ : ಇವನನ್ನು ಹೀಗೆ ಕಟ್ಟಿದ್ದೀರಲ್ಲಾ. ಹಿಂಸೆಯಾಗುವುದಿಲ್ಲವೆ? ಹೀಗೆ ಮಾಡಬಾರದು. ಹೀಗೆ ಕಟ್ಟುವುದರಿಂದ ಹೆಚ್ಚು ಉದ್ರೇಕವಾಗುತ್ತದೆ.

ಮಾರಯ್ಯ : ಅಯ್ಯೋ ಬಿಡ್ಬೇಡಿ ಬುದ್ಧೀ. ಬಲು ರಾಂಗ್ ಮಾಡ್ತಾನೆ. ಚಾಕು ಹಿಡ್ಕೊಂಡು ಹೊಡೆಯೋಕೆ ನಿಂತಿದ್ದ. ಅವನ್ನ ಕರ್ಕೊಂಡು ಬರ್ಬೇಕಾದ್ರೆ ನಮಗೆ ಸಾಕ್ ಬೇಕಾಗೋಯ್ತು. ಬಿಟ್ರೆ ಓಡೋಂಟೋಯ್ತಾನೆ.

ಡಾಕ್ಟರ್ : ಅಲ್ಲಪ್ಪಾ, ನಿಮ್ಮೂರಲ್ಲಿ ಡಾಕ್ಟರ್ ಇಲ್ಲವಾ ?

ಮಾರಯ್ಯ : ಅವರೆ ಬುದ್ಧಿ. ನಮ್ಮ ಹಿರೇಗೌಡ್ರ ಮಗಾನೇ ಶಾಪಿಕ್ಕವನೆ. ಬಲು ಚಂದಾಗಿ ನೋಡ್ತಾನೆ. ಕೈಗುಣ ಚೆಂದಾಗದೆ.

ಡಾಕ್ಟರ್ : ಅವರಿಗೆ ಹೇಳಿದ್ದರೆ ಮತ್ತುಬರೋ ಇನ್‌ಜೆಕ್ಷನ್ ಕೊಟ್ಟಿರೋರು. ಯಾವ ತಾಪತ್ರಯ ಇಲ್ಲದೆ ಇವನನ್ನು ಕರೆದುಕೊಂಡು ಬರಬಹುದಿತ್ತು. ಅದನ್ನು ಮಾಡೋದ್‌ಬಿಟ್ಟು, ಹಗ್ಗದಿಂದ ಕಟ್ಟಿದ್ದೀರಲ್ಲಾ. ಇವನಿಗೆ ಎಷ್ಟು ನೋವು? ನಿಮಗೆ ಎಷ್ಟು ಕಷ್ಟ?

ಮಾರಯ್ಯ : ನಮಗೆ ತಿಳೀಲಿಲ್ಲ ಬುದ್ಧಿ. ಇನ್ಮೇಲೆ ಇಂಗ್ ಮಾಡಾಕಿಲ್ಲ.

ಕೃಷ್ಣ : (ಕಟ್ಟುಗಳಿಂದ ಬಿಡುಗಡೆ ಹೊಂದಿ) ಇವರೇ ಡಾಕ್ಟ್ರೆ. ನನ್ನ ಕೈಕಟ್ಟಿ, ಹೊಡೆದು ಎಳ್ಕೊಂಡು ಬಂದಿದ್ದು. ಎಲ್ಲೀಗೆ ಹೋಗೋದು ಅಂತ ಹೇಳ್ಲಿಲ್ಲ. ಆಸ್ಪತ್ರೆಗೆ ಹೋಗೋಣ ಅಂದಿದ್ರೆ ನಾನೇ ಬರ್‍ತಿದ್ದೆ. ಏನೂ ಹೇಳ್ದೆ, ಒಳ್ಳೇ ದನಾ ಎಳ್ಕೊಂಡ್ ಬಂದಂಗೆ ಮಾಡದ್ರೆ ನಾನೇನ್ಮಾಡಲಿ? ಒದ್ದಾಡ್ದೆ. ಬಾಯಿಗೆ ಬಂದಂತೆ ಬೈದೆ.

ನರ್ಸ್ : ಅವರು ತಿಳೀದೆ ಹಾಗೆ ಮಾಡಿದ್ದಾರೆ. ಬೇಜಾರು ಮಾಡಿಕೋಬೇಡ. ಬಾ. ಇಲ್ಲಿ ಸ್ವಲ್ಪ ದಿವಸ ಇದ್ದು ಸುಧಾರಿಸಿಕೊಳ್ಳುವಂತೆ. (ಎಂದು ಕರೆದೊಯ್ಯುವರು.

ಡಾಕ್ಟರ್ ಮಾರಯ್ಯ ಮತ್ತು ಇತರರನ್ನು ಮಾತಾಡಿಸುತ್ತಾ ಕೃಷ್ಣನ ಬಾಯಿಲೆ ವಿವರಗಳನ್ನು ತೆಗೆದುಕೊಂಡು ಕೇಸ್ ಷೀಟ್ ಬರೆಯಲು ಶುರು ಮಾಡುತ್ತಿದ್ದಂತೆ ತೆರೆ ಬೀಳುವುದು).

## ದೃಶ್ಯ 4

ರಂಗದಲ್ಲಿ ಯಾವ ಉಪಕರಣ, ಸಾಮಾನೂ ಇಲ್ಲ. ಡಾಕ್ಟರ್ ಮತ್ತು ಗುಣವಾಗಿರುವ ಕೃಷ್ಣ ಪ್ರವೇಶಿಸುತ್ತಾರೆ. ಕೃಷ್ಣ ಖಾಕಿ ನಿಕ್ಕರ್, ತುಂಡು ತೋಳಿನ ಶರ್ಟ್ ಧರಿಸಿದ್ದಾನೆ.

ಡಾಕ್ಟರ್ : ಏನು ಕೃಷ್ಣ ಹೇಗಿದ್ದೀಯಾ ?

ಕೃಷ್ಣ : ಚೆನ್ನಾಗಿದ್ದೇನೆ ಸಾರ್.

ಡಾಕ್ಟರ್ : ಮಾತ್ರೆಗಳನ್ನು ಸರಿಯಾಗಿ ತೆಗೆದುಕೊಳ್ತಾ ಇದ್ದೀಯಾ ?

ಕೃಷ್ಣ : ಊಂ ಸಾರ್. ಬೆಳಿಗ್ಗೆ ಒಂದು, ಮಧ್ಯಾಹ್ನ ಒಂದು, ರಾತ್ರಿಗೆ ಎರಡು ಮಾತ್ರೆ.

ಡಾಕ್ಟರ್ : ಗುಡ್, ಮನೇಗೆ ಹೋಗಬೇಕು ಅಂತ ಅನ್ಸಲ್ವ?

ಕೃಷ್ಣ : ಹೋದ ವಾರಾನೇ ಮನೇಗೆ ಹೋಗಬೇಕು ಅಂತ ಸಿಸ್ಟರ್‌ಗೆ ಹೇಳ್ದೆ ಸಾರ್. ನಿಮ್ಮನ್ನು ಕೇಳು, ಅವರು ಹೋಗಬಹುದು ಅಂತ ಹೇಳ್ದಾಗ ಹೋಗಬೇಕು ಅಂತ ಅಂದರು.

ಡಾಕ್ಟರ್ : ಅಂದಹಾಗೆ ನಿನ್ನ ಚಿಕ್ಕಪ್ಪನ ಮಗನಿಗೂ ನಿನಗೂ ಏಕೆ ದ್ವೇಶ? ಅವನನ್ನು ಎರಡು ಸಾರಿ ಹೊಡೆಯೋದಕ್ಕೆ ಹೋಗಿದ್ದೆಯಂತೆ. ಒಂದು ಸಾರಿ ನಿನಗೆ ಒಂದು ವರ್ಷ ಜೈಲಾಗಿತ್ತಂತೆ. ಹೌದಾ ?

ಕೃಷ್ಣ : ಅದೊಂದು ದೊಡ್ಡ ಕಥೆ ಸಾರ್...ಎರಡು ವರ್ಷದ ಹಿಂದೆ ನನ್ನ ಮದುವೆ ನಿಷ್ಕರ್ಷೆ ಆಗಿತ್ತು. ನಾನು ಬಹಳ ಸಂತೋಷವಾಗಿದ್ದೆ... (ಈ ಹೊತ್ತಿಗೆ ಅವರು ರಂಗದ ಒಂದು ತುದಿಗೆ ಹೋಗಿರ್‍ತಾರೆ. ಈಗ ಮರೆಯಾಗ್ತಾರೆ.

ಒಂದು ತುದಿಯಿಂದ ಯಾಲಕ್ಕಿ ಪ್ರವೇಶಿಸುತ್ತಾನೆ. ಎಗರಿ, ಬಗ್ಗಿ ರಂಗದ ಇನ್ನೊಂದು ತುದಿಯತ್ತ ನೋಡುತ್ತಾ...)

ಯಾಲಕ್ಕಿ : ಯಾರಪ್ಪ ಇದು ಬರ್‍ತಾ ಇರೋದು?...ನಮ್ ಕೃಷ್ಣ ಇದ್ದಂಗವನಲ್ಲ...ಇವನಿಗೇನು ಬಂತು ಈವತ್ತೂ...ಇಜಾರ ಆಕ್ಕಂಡವನೆ...ಬಣ್ಣ ಬಣ್ಣದ ಅಂಗಿ ತೊಟ್ಕಂಡವನೆ ಮದ್ವೆ ಗಂಡಾಗವನೆ. ಏನಪ್ಪಾ ವಿಸೇಸ?

(ಕೃಷ್ಣ ಶರ್ಟ್ ಪ್ಯಾಂಟ್ ತೊಟ್ಟು, ಹೆಗಲ ಮೇಲೊಂದು ಟುವೆಲ್ ಹಾಕ್ಕೊಂಡು ಶಿಸ್ತಾಗಿ ಬರುವನು. ಯಾಲಕ್ಕಿ ಅವನನ್ನೇ ನೋಡುತ್ತಾ ಅವನ ಸುತ್ತ ಒಂದು ಸುತ್ತು ಬರುವನು)

ಕೃಷ್ಣ : ಯಾಕ್ಲೇ ಯಾಲಕ್ಕಿ? ಅಂಗೆ ನೋಡ್ತೀಯಾ ನನ್ನ?

ಯಾಲಕ್ಕಿ : ಯಪ್ಪೋ ಯಪ್ಪೋ...ಇಷ್ಟೊಂದು ಸಿಂಗಾರಾ ಮಾಡ್ಕೊಂಡಿದ್ದೀ...ಏನ್ ನಿನಗೆ ಮದ್ವೇನಾ?

ಕೃಷ್ಣ : ಅಲೆ ನನ್ಮಗನೇ, ನಿಂಗೆ ಎಂಗೆ ಗೊತ್ತಾಯ್ತಲೇ?

ಯಾಲಕ್ಕಿ : ನೋಡಿದ್ರೆ ತಿಳಿಯಾಕಿಲ್ವಾ? ಈಪಾಟಿ ಅಲಂಕಾರಾನ ಮದ್ವೆ ಗಂಡಲ್ಲದೆ ಇನ್ನಾರು ಮಾಡ್ಕಂಡಾರು ಈ ಹಳ್ಳೀವಳ್ಗ...ಕೃಷ್ಣ, ಹೆಣ್ಣು ಯಾರು?

ಕೃಷ್ಣ : ಹೋಗೋ...ಹೇಳಾಕಿ ನನಗೆ ನಾಚ್ಕೆ ಆಯ್ತದೆ...

ಯಾಲಕ್ಕಿ : ಸರಿಹೋಯ್ತಪ್ಪಾ. ಮದ್ವೆ ಹೆಣ್ಣು ನಾಚ್ಕೊಂಡಂಗೆ ನಾಚ್ಕೊತ್ತೀಯಲ್ಲಾ. ಹೆಣ್ಣು...ರಂಗಯ್ಯನ ಮಗಳು ಗಂಗೀನಾ?

ಕೃಷ್ಣ : ಊಂ ಯಾರಿಗೂ ಹೇಳ್ಬೇಡ.

ಕೆಂಚುಟಿಗ : (ಪ್ರವೇಶಿಸುತ್ತಾ) ಎಲ್ಲಿ ಹಾಳಾಗೋಗಿದ್ಯಲೇ ಯಾಲಕ್ಕಿ? ನಿನ್ನ ಎಷ್ಟು ಕಡೇನ್ಲಾ ಹುಡುಕೋದು. ಓಹೋ ಕೃಷ್ಣ.. ಏನು ಸಿಂಗಾರಾ ಮಾಡಿಕೊಂಡುಬಿಟ್ಟದ್ದೀಯ?

ಯಾಲಕ್ಕಿ : ನಮ್ಮ ಕೃಷ್ಣನಿಗೆ ಮದ್ವೆ ಕಣಣ್ಣೋ. ಹೆಣ್ಣು ಯಾರು ಗೊತ್ತಾ? ರಂಗಯ್ಯನ ಮಗಳು, ಆ ಬಂಗಾರದ ಗೊಂಬೆ ಗಂಗಿ.

ಕೆಂಚುಟಿಗ : ಗಂಗಿ...ಒಳ್ಳೇ ಹುಡ್ಗೀನೆ ಹೊಡೆದುಬಿಟ್ಟೆಯಲ್ಲೋ ಕೃಷ್ಣ. ಯಾವಾಗ ಲಾಡು ಊಟ ಅಂಗಾರೆ?

ಕೃಷ್ಣ : (ನಾಚುತ್ತಾ) ಇನ್ನೂ ಗೊತ್ತಿಲ್ಲ. ಮುಂದಲ ವಾರ ಲಗ್ನ ಕಟ್ಟಿಸ್ತಾರಂತೆ. ನಾನು ಬರ್‍ತೀನೆ. (ಹೋಗುತ್ತಾನೆ)

ಕೆಂಚುಟಿಗ : ಯಾಲಕ್ಕಿ ಈ ಮದ್ವೇನ ಹೆಂಗಾರಾ ಮಾಡಿ ನಿಲ್ಲಿಸಬೇಕಲ್ಲಾ.

ಯಾಲಕ್ಕಿ : ಯಾಕಣ್ಣೋ, ಹುಡ್ಗಂಗೂ ಹುಡ್ಗೀಗೂ ಜೋಡಿ ಪಸಂದಾಗಿರತ್ತೆತೆ.

ಕೆಂಚುಟಿಗ : ಗಜನಿಂಬೆ ಹಣ್ಣಂತ ಗಂಗಿ ಕೃಷ್ಣಂಗೆ ಸಿಕ್ಕಬಾರದು.

ಯಾಲಕ್ಕಿ : ಏಕೆ, ಇನ್ನಾರಿಗೆ ಸಿಕ್ಕಬೇಕು?

ಕೆಂಚುಟಿಗ : ನನಗೆ. ಅವಳು ನನ್ನ ಸ್ವತ್ತಾಗಬೇಕು.

ಯಾಲಕ್ಕಿ : ನಿನಗೆ ಆಗಲೆ ಮದ್ವೆ ಆಗದೆ. ಎಲ್ಡ್ ಮಕ್ಕಳವೆ. ಈಗ ಇನ್ನೂ ಒಂದು ಮದ್ವೆ ಮಾಡ್ಕತ್ತೀಯ

ಕೆಂಚುಟಿಗ : ಒಂದಲ್ಲದಿದ್ದರೆ ಹತ್ತು ಮದ್ವೆ ಮಾಡ್ಕೊಳೋ ತಾಕತ್ ಅಯ್ತೆ ನನಗೆ. (ಮೀಸೆ ತಿರುವುತ್ತಾನೆ) ಹತ್ರಾ ಬಾರ್‍ಲಾ ಇಲ್ಲಿ...(ಕಿವಿಯಲ್ಲಿ ಒಂದಷ್ಟು ಪಿಸುಗುಟ್ಟುವನು)

ಯಾಲಕ್ಕಿ : (ತುಂಬಾ ಹೆದರಿಕೊಂಡಂತೆ ಮಾಡುತ್ತಾ) ಬೇಡಕಣಣ್ಣಾ, ನನ್ನ ಕೈಲಿ ಆಗಾಕಿಲ್ಲಾ. ರಂಗಯ್ಯನಿಗೆ ಗೊತ್ತಾದರೆ ನನ್ನ ಪ್ರಾಣ ತೆಗೆದುಬಿಡ್ತಾನೆ.

ಕೆಂಚುಟಿಗ : ಪೆಕರ ನನ್ಮಗನೆ...ನಾನು ಹೇಳ್ದಂಗೆ ಮಾಡು. ನಿನಗೇನೂ ಆಗೋದಿಲ್ಲ. ಮಾಡ್ದೇ ಹೋದರೆ ನಾನೇ ನಿನ್ನ ಪ್ರಾಣ ತೆಗೆದುಬಿಡ್ತೀನಿ (ಎಂದು ಅವನ ಕತ್ತಿನ ಪಟ್ಟಿ ಹಿಡಿದು ಎತ್ತಿ ಹೆದರಿಸುವನು)

ಯಾಲಕ್ಕಿ : ಅಯ್ಯಯ್ಯೋ ಬಿಡಣ್ಣ. ನೀನು ಹೇಳ್ದಂಗೆ ಮಾಡ್ತೀನಿ, ನಿನ್ನ ದಮ್ಮಯ್ಯ ಬಿಡು.

— ತೆರೆ —

## ದೃಶ್ಯ 5

ಹಿನ್ನೆಲೆಯಲ್ಲಿ ಹೆಣ್ಣಿನ ಆರ್ತನಾದ. "ಅಯ್ಯೋ ಕಾಪಾಡೀ...ಬಿಡೋ ನನ್ನ...ಅಯ್ಯೋ ಯಾರೂ ಇಲ್ವೇ . ಕಾಪಾಡಿ...ಕೇಡಿಗ ಬಿಡೋ...

ಕೆಂಚುಟಿಗನ ಧ್ವನಿ : ಏಯ್ ಯಾಲಕ್ಕಿ. ಸರಿಯಾಗಿ ಹಿಡ್ಕೋಳೋ ಬೇಕುಪ್ಪ.

ಯಾಲಕ್ಕಿಯ ಧ್ವನಿ : ಅಯ್ಯೋ, ಪರಚ್ತಾಳೆ. ನನ್ನ ಕೈಲಾಗೋಲ್ಲಾಪ್ಪ.

ರಂಗದ ಒಂದು ಕಡೆಯಿಂದ ಕೃಷ್ಣ ಪ್ರವೇಶಿಸಿ, ಧ್ವನಿ ಬರುತ್ತಿರುವ ಕಡೆಗೆ ಬಗ್ಗಿ ನೋಡುತ್ತಾ ಒಂದು ತುದಿಯಲ್ಲಿ ನಿಲ್ಲುತ್ತಾನೆ.

ಇನ್ನೊಂದು ಕಡೆಯಿಂದ ಕೆಂಚುಟಿಗ ಮತ್ತು ಯಾಲಕ್ಕಿ ಏದುಸಿರು ಬಿಡುತ್ತಾ ಕಾಣಿಸಿಕೊಳ್ಳುತ್ತಾರೆ.

ಕೆಂಚುಟಿಗ : ಪೆದ್ದನನ್ಮಗನೆ. ನೀನು ಮೂರು ಕಾಸಿಗೆ ಪ್ರಯೋಜನ ಇಲ್ಲ. ಒಂದು ಹುಡ್ಗೀನ ಹಿಡ್ಕೋ ಳೋಕೆ ನಿನ್ನ ಕೈಲಿ ಆಗ್ಲಿಲ್ಲವಲ್ಲೋ. ಗಂಡ್ಸಂತೆ ಗಂಡ್ಸು. ನೀ ಬಿಟ್ಟೆ, ಅವಳು ಓಡಿಹೋದಳು.

ಯಾಲಕ್ಕಿ : ಏ ಹೋಗಣ್ಣೋ. ಒಳ್ಳೇ ಕಾಡುಬೆಕ್ಕು ಪರ್ಚ ದಂಗೆ ನನ್ನ ಮುಖ ಮೈನೆಲ್ಲಾ ಪರ್ಚಿದ್ದಲ್ಲದೆ, ಗಂಗಿ ನನ್ನ ಕೈಯನ್ನು ಕಡಿದುಬಿಟ್ಟಳು. ನೋಡು (ಎಂದು ಕೈ ತೋರುವನು)

ಕೆಂಚುಟಿಗ : (ಕೃಷ್ಣನನ್ನು ಕಂಡು ಹೆದರಿ) ಲೇ, ಕೃಷ್ಣ ಇಲ್ಲೇ ನಿಂತವನೆ. ನಾವು ಮಾಡಿದ್ದನ್ನು ಅವನು ನೋಡಿ ದ್ಬೋದು. ಓಡು.

ಇಬ್ಬರೂ ರಂಗದ ಇನ್ನೊಂದು ಕಡೆಗೆ ದೌಡಾಯಿಸಿ ಮರೆಯಾಗುವರು. ಕೃಷ್ಣ ಅವರು ಹೋದ ದಿಕ್ಕನ್ನು ನೋಡುತ್ತಾ ಹಲ್ಲು ಕಡಿಯುತ್ತಾನೆ. "ಬೇವರ್ಸಿಗಳಾ" ಎಂದು ಬೈದು ಥೂ ಎಂದು ಉಗಿಯುತ್ತಾನೆ.

—ತೆರೆ—

## ದೃಶ್ಯ 6

ಕೆಂಚುಟಿಗ, ಯಾಲಕ್ಕಿ ಮತ್ತು ಪೈಲ್ವಾನರುಗಳಂತೆ ಕಾಣುವ ಇನ್ನಿಬ್ಬರು ಇಸ್ಪೀಟು ಆಡುತ್ತ ಕುಳಿತಿರು ತ್ತಾರೆ. ಯಾಲಕ್ಕಿ ಆಟಕ್ಕಿಂತ ಪಕ್ಕದಲ್ಲಿ ಇಟ್ಟು ಕೊಂಡಿದ್ದ ಖಾರಾಸೇವೆಯನ್ನು ತಿನ್ನುವುದರಲ್ಲೇ ಆಸಕ್ತಿ ತೋರಿಸುತ್ತಿರುತ್ತಾನೆ.

ಕೆಂಚುಟಿಗ : ಲೇ ಯಾಲಕ್ಕಿ ನ್ಯಾಯವಾಗಿ ಆಡೋವಂಗಿದ್ರೆ ಆಡು. ಇಲ್ದಿದ್ರೆ ಎತ್ತು ನಿನ್ನ ಕಂತೇನಾ.

ಯಾಲಕ್ಕಿ : (ಇನ್ನಷ್ಟು ಖಾರಾಸೇವೆಯನ್ನು ಬಾಯಿಗೆ ಹಾಕ್ಕೊಂಡು) ಇಲ್ಲಣ್ಣ. ಇನ್ನು ಸರಿಯಾಗಿ ಆಡ್ತೀನಿ...ಖಾರಾಸೇವೆ ಭೋ ಚೆಂದಾಗದೆ.

ಕೃಷ್ಣ ಹರಿತವಾದ ಮಚ್ಚನ್ನು ಹಿಡಿದುಕೊಂಡು ಬಂದು ನಿಲ್ಲುತ್ತಾನೆ. ಎಲ್ಲರೂ ಗರ ಬಡಿದವರಂತೆ ಅವನನ್ನು ನೋಡುತ್ತಾರೆ.

ಕೃಷ್ಣ : ಲೇ ಕೆಂಚುಟಿಗ, ಬರ್ತಾ ಬರ್ತಾ ನಿನ್ನ ಕೊಬ್ಬು ಜಾಸ್ತಿ ಆಯ್ತಾ ಅದೆ. ನನ್ನ ಗಂಗೀನ ಮುಟ್ಟೋ ದಕ್ಕೆ ನಿನಗೆಷ್ಟು ಧೈರ್ಯ?

(ಯಾಲಕ್ಕಿ ಮೆಲ್ಲಮೆಲ್ಲಗೆ ಆದಷ್ಟು ಹಿಂದಕ್ಕೆ ಹೋಗುವನು.)

ಕೆಂಚುಟಿಗ : ಏ, ಏಯ್, ಕೃಷ್ಣ. ಏನೋ ಇದು? ... ಆ ಮಚ್ಚು ಒಳ್ಳೇದಲ್ಲ...ಅತ್ತ ಹಾಕ್ಬಿಡು. ನಿನ್ನ ಗಂಗೀಗೆ ನಾನೇನು ಮಾಡ್ಲಿಲ್ಲಪ್ಪ...ಮದ್ವೆ ವಿಚಾರವಾಗಿ ಸ್ವಲ್ಪ ತಮಾಷಿ ಮಾಡ್ದೆ. ಅವಳು ಅಷ್ಟಕ್ಕೇ ಕೋಪ ಮಾಡ್ಕೊಂಡು ಹೊರಟು ಹೋದ್ಳು. ಅಷ್ಟೆ.

ಕೃಷ್ಣ : ಸುಳ್ಳು ಬೊಗಳಬೇಡ ಕೆಂಚುಟಿಗ, ಅವಳನ್ನು ಹೊತ್ಕೊಂಡು ಹೋಗೋದಕ್ಕೆ ನೀನು ಪ್ಲಾನ್ ಮಾಡ್ದೆ. ಅವಳ ನಸೀಬು ಚೆನ್ನಾಗಿತ್ತು. ತಪ್ಪಿಸಿ ಕೊಂಡಳು. ಈ ಹೊತ್ತು ನನ್ನಿಂದ ನೀನು ತಪ್ಪಿಸ್ಕೊಳೋಕ್ಕೆ ಬಿಡೋದಿಲ್ಲ (ಎಂದು ನುಗ್ಗುವನು.

ಆದರೆ ಉಳಿದಿಬ್ಬರು ಅವನನ್ನು ಹಿಂದಿನಿಂದ ಹಿಡಿದು ಕಟ್ಟಿಹಾಕುವರು)

ಕೆಂಚುಟಿಗ : ಬಲು ಸೂರ, ವೀರಾಧಿವೀರ, ಕೃಷ್ಣ, ನೀನು ನನ್ನ ಮೇಲೆ ಕೈ ಮಾಡಿದ್ದೀಯಾ. ನಿನ್ನ ಜೈಲಿಗೆ ಹಾಕಿಸ್ದೇ ಹೋದರೆ, ನಾನು ನನ್ನ ಅಪ್ಪನಿಗೆ ಹುಟ್ಟಲಿಲ್ಲ. ಎಳ್ಕಂಡು ನಡೀರೋ ಪೋಲೀಸ್ ಸ್ಟೇಶನ್ನಿಗೆ. ನಡೀ ಅಲ್ಗೆ. ಪೋಲೀಸ್‌ನೋರು ಮಾಡ್ತಾರೆ ನಿನ್ಗೆ ಮದ್ವೆ.

ಕೃಷ್ಣನನ್ನು ಎಳೆದೊಯ್ಯುವರು

—ತೆರೆ—

ಕೃಷ್ಣ, ಡಾಕ್ಟರ್ ಪ್ರವೇಶಿಸುವರು.

ಡಾಕ್ಟರ್ : ಆಮೇಲೇನಾಯ್ತು ?

ಕೃಷ್ಣ : ನನ್ನ ಮೇಲೆ ಕ್ರಿಮಿನಲ್ ಕೇಸ್ ಹಾಕಿದರು ಸಾರ್. ಜಾಮೀನು ಕೊಟ್ಟು ಮನೇಗೆ ಕರೆದು ಕೊಂಡು ಹೋಗೋದಕ್ಕೆ ನಮ್ಮಪ್ಪನ ಹತ್ತಿರ ಕಾಸಿರಲಿಲ್ಲ. ಸಾಲ ಮಾಡೋದು ಬೇಡ ಅಂತ ಜೈಲಿನಲ್ಲಿ ಉಳಿದ್ಕೊಂಡೆ. ವಿಚಾರಣೆ ಮುಗಿಯೋ ಹೊತ್ಗೆ ಹತ್ತು ತಿಂಗಳಾಯ್ತು. ನಾನು ತಪ್ಪು ಮಾಡ್ದೆ ಅಂತ ಎರಡು ತಿಂಗಳು ಶಿಕ್ಷೆ ಆಯ್ತು. ಒಟ್ಟು ಒಂದು ವರ್ಷ ಜೈಲಿ ನಲ್ಲಿದ್ದೆ. ತೀರ್ಪು ಕೊಟ್ಟಾಗ ನಮ್ಮಪ್ಪ ಕೋರ್ಟಿಗೆ ಬಂದಿದ್ದ. ಆಮೇಲೆ ಬರಲೇ ಇಲ್ಲ. ಜೈಲಿನಿಂದ ಬಿಡುಗಡೆ ಆಗಿ ಸೀದ ನಮ್ಮೂರಿಗೆ ಹೋದೆ.

ಇಬ್ಬರೂ ಮರೆಯಾಗುವರು.

ಕೃಷ್ಣ ಕೈನಲ್ಲಿ ಒಂದು ಬಟ್ಟೆ ಗಂಟನ್ನು ಹಿಡಿದು ಕೊಂಡು ಪ್ರವೇಶಿಸುವನು. ಅಪ್ಪಾ ಅಪ್ಪಾ ಎಂದು ಕೂಗುವನು. ಯಾರೂ ಬರುವುದಿಲ್ಲ.

ವೃದ್ಧ ಹಳ್ಳಿಯವನೊಬ್ಬ ಪ್ರವೇಶಿಸಿ, ಯಾರೂ, ಕೃಷ್ಣನೇ ?

ಕೃಷ್ಣ : ರಾಮಜ್ಜ. ನಮ್ಮಪ್ಪ ಎಲ್ಲಿ? ಕಾಣಿಸ್ತನೇ ಇಲ್ಲ.

ರಾಮಜ್ಜ : ಅಯ್ಯೋ ನನ್ ಶಿವನೆ. ನಿಂಗೊತ್ತಿಲ್ವೇನಪ್ಪ. ನಿಮ್ಮಪ್ಪ ತೀರ್ಕೊಂಡು ಈವೊತ್ತಿಗೆ ಒಂದು ತಿಂಗಳಾಯಿತು. ತೋಟದಿಂದ ಬಂದು ಎದೆ ನೋವು ಅಂತ ಮಲಿಕ್ಕಂಡವನು ಮತ್ತೆ ಮೇಲಕ್ಕೆ ಏಳಲಿಲ್ಲ. ಡಾಕುಟ್ರು ಬಂದು ಗುಂಡಿಗೆ ನಿಂತೋಗದೆ ಅಂದರು.

ಕೃಷ್ಣ : ಕುಸಿದು ಕುಳಿತುಕೊಳ್ಳುವನು. ಮುಖ ಮುಚ್ಚಿಕೊಂಡು ಬಿಕ್ಕಳಿಸಿ ಅಳುವನು.

ರಾಮಜ್ಜ : ಅಳಬೇಡಪ್ಪ. ಧೈರ್ಯ ತಂದುಕೋ ನನ್ನಪ್ಪ. ನಿಮ್ಮಪ್ಪಂಗೆ ಒಳ್ಳೇ ಸಾವು ಬಂತು. ಕಾಯಿಲೆ ಬೀಳಲಿಲ್ಲ, ನರಳಲಿಲ್ಲ, ನೋಯಲಿಲ್ಲ. ಪುಣ್ಯವಂತ.

ಕೃಷ್ಣ : ಅಪ್ಪ...ಎಂದು ಬಿಕ್ಕಳಿಸಿ ಅಳುತ್ತಿದ್ದವನು ನಗಲು ಪ್ರಾರಂಭಿಸುತ್ತಾನೆ.

ನಾನು ಜೈಲಿಗೆ ಹೋದೆ. ನಮ್ಮಪ್ಪ ಸತ್ತ. ಕೆಂಚುಟಿಗ ಗೆದ್ದ. ನಾ ಬಿದ್ದೆ...,ಹ...ಹ್ಹಾ...

—ತೆರೆ—

## ದೃಶ್ಯ 7

ಒಂದು ಕಡೆಯಿಂದ ಬೀಡಿ ಸೇದುತ್ತಾ ಯಾಲಕ್ಕಿ, ಕೆಂಚುಟಿಗ ಪ್ರವೇಶಿಸುತ್ತಾರೆ. ಮತ್ತೊಂದು ಕಡೆಯಿಂದ ಸಮಾಜ ಕಾರ್ಯಕರ್ತ ಗೋಪಾಲ ಪ್ರವೇಶಿಸುತ್ತಾನೆ. ಗೋಪಾಲನ ಕೈಯಲ್ಲಿ ಒಂದು ಫೈಲ್ ಇರುತ್ತದೆ.

ಗೋಪಾಲ : ನಮಸ್ಕಾರ, ಇದು ದಾಸನ ಪುರ ಅಲ್ಲವೇ ?

ಕೆಂಚುಟಿಗ : (ನಮಸ್ಕಾರ ಮಾಡಿ) ಹೌದು, ನೀವು ಊರಿಗೆ ಹೊಸಬರಂಗೆ ಕಾಣ್ತೀರಿ. ಯಾರು ಬೇಕು ನಿಮಗೆ ?

ಗೋಪಾಲ : ಕೆಂಚುಟಿಗಯ್ನ ಅನ್ನೋವರನ್ನ ನೋಡಬೇಕಿತ್ತು.

ಯಾಲಕ್ಕಿ : ತಕ್ಕಳಪ್ಪ. ಸ್ವಾಮೀ, ಇವರೇ ಕೆಂಚುಟಿಗಯ್ಯ, ನಾನು ಇವರ ಸಿನೇಹಿತ...ಯಾಲಕ್ಕಿ.

ಕೆಂಚುಟಿಗ : ನೀವು ಯಾರು ಸಾರ್ ?

ಗೋಪಾಲ : ನಾನು ಗೋಪಾಲ್ ಅಂತ. ಬೆಂಗಳೂರು ಮಾನಸಿಕ ಆಸ್ಪತ್ರೆಯಿಂದ ಭಂದಿದ್ದೀನಿ.

ಕೆಂಚುಟಿಗ :<br>ಯಾಲಕ್ಕಿ : } ಯಾವ ಆಸ್ಪತ್ರೆ ?

ಗೋಪಾಲ್ : ಮಿದುಳು ಖಾಯಿಲೆ. ಬುದ್ಧಿ ಕೆಟ್ಟುಹೋದರೆ ನೋಡ್ತಾರಲ್ಲ ಆ ಆಸ್ಪತ್ರೆ.

ಕೆಂಚುಟಿಗ : ಓಹೋ ಹುಚ್ಚಾಸ್ಪತ್ರೆ...ನೀವು ಡಾಕ್ಟ್ರ ?

ಗೋಪಾಲ್ : ಇಲ್ಲ, ನಾನು ಸಮಾಜ ಕಾರ್ಯಕರ್ತ.

ಕೆಂಚುಟಿಗ : ಅಂಗಂದ್ರೆ ಏನು ಸ್ವಲ್ಪ ಬಿಡಿಸಿ ಹೇಳಿ.

ಗೋಪಾಲ್ : ಕೆಲವು ಸರ್ತಿ, ಮನಸ್ತಾಪ, ಜಗಳ, ಕಷ್ಟನಷ್ಟಗಳಿಂದ ಮನೋರೋಗ ಬರುತ್ತೆ. ಆಗ ಮನೆಯವರ ಜೊತೇಲಿ ಮಾತಾಡಿ, ಅವರ ಸಹಾಯ ರೋಗಿಗೆ ಸಿಗುವ ಹಾಗೆ ಮಾಡೋದು, ವಾತಾವರಣದಲ್ಲಿ ಸೂಕ್ತ ಬದಲಾವಣೆ ತರೋದು ನನ್ನ ಕೆಲಸ.

ಯಾಲಕ್ಕಿ : ಆಸ್ಪತ್ರೇಲಿ ನಮ್ಮ ಕೃಷ್ಣನನ್ನು ನೋಡಿದ್ದೀರಾ ? ಎಂಗವ್ನೆ ?

ಗೋಪಾಲ್ : ಕೃಷ್ಣ ಚೆನ್ನಾಗಿದ್ದಾನೆ. ಖಾಯಿಲೆ ಗುಣವಾಗಿದೆ.

ಯಾಲಕ್ಕಿ : ಅವನಿಗೆ ಮಿದ್ಲೆ ಕೆಟ್ಟುಹೋಗಿತ್ತಂತೆ. ಕುಯ್ದು ತೆಗೆದುಹಾಕಿಬಿಟ್ರಾ ? ನಮ್ಮ ಕುಂಟ ಬೀರನಿಗೆ ಕಾಲು ಕೊಳೆತುಹೋಗಿತ್ತೂ ಅಂತ ಕಾಲೇ ಕೊಯ್ದಾಕಿಬಿಟ್ಟರು.

ಗೋಪಾಲ : ಹಾಗಲ್ಲ, ಕೃಷ್ಣನ ಮನಸ್ಸಿಗೆ ಖಾಯಿಲೆ ಬಂದಿತ್ತು. ಔಷಧಿ ಮಾತ್ರೆ ಕೊಟ್ಟೆೊ. ಈಗ ಉಶಾರಾಗಿದ್ದಾನೆ.

ಕೆಂಚುಟಿಗ : ಆಸ್ಪತ್ರೇಲಿ ಅವನು ಯಾರಿಗೂ ಹೊಡೀಲಿಲ್ವಾ? ಇಲ್ಲಿ ನನ್ನ ಹೊಡೆಯೋಕೆ ಮಚ್ಚು ಚಾಕು ತಂದ್ಬಿಟ್ಟಿದ್ದ. ನನ್ನ ಅದೃಷ್ಟ ಚೆನ್ನಾಗಿತ್ತು. ತಪ್ಪಿಸ್ಕೊಂಡೆ.

ಗೋಪಾಲ : ನಿಮಗೂ ಕೃಷ್ಣಂಗೂ ಏಕೆ ದ್ವೇಶ ?

ಯಾಲಕ್ಕಿ : ಯಾಕೆ ಅಂತಂದ್ರೆ ಕೃಷ್ಣ ಮದ್ವೆ ಮಾಡಿಕೊಳ್ಳಬೇಕಾದ ಹೆಣ್ಣಿನ ಮೇಲೆ ಇವರು ಕಣ್ಣಾಕುದ್ರು. ಅಲ್ಲೇ ಎಡವಟ್ಟಾಯ್ತು.

ಕೆಂಚುಟಿಗ : ಯಾಲಕ್ಕೀ, ಬಾಯ್ಮುಚ್ಚಿಕೊಂಡಿರ್ಲೇ.

ಗೋಪಾಲ : ಆ ಹುಡುಗಿಯನ್ನು ನೀವು ಮದುವೆಯಾದಿರಾ ?

ಯಾಲಕ್ಕಿ : ಇವರಿಗೆ ಆಗ್ಲೆ ಒಂದು ಮದ್ವೆ ಆಗದೆ. ಇನ್ನೊಂದು ಮಾಡ್ಕೋಬೇಕು ಅಂತ ನೋಡಿದ್ರು. ಆಗ್ಲಿಲ್ಲ.

ಗೋಪಾಲ : ಏಕೆ ಆಗಲಿಲ್ಲ ?

ಯಾಲಕ್ಕಿ : ಹೆಣ್ಣು ಕೇಳಾಕೆ ನಾಚ್ಗೆ ಆಗೋಕಿಲ್ವಾ ? ಇನ್ನೊಂದು ಸಾರಿ ಬಂದು ನೋಡು ಕಾಲು ಮುರೀತೀನಿ ಅಂದ ಗಂಗಿಯ ಅಪ್ಪ. ಇವರ ಹೆಂಡ್ರು ನೀವು ಇನ್ನೊಂದು ಮದ್ವೆ ಮಾಡ್ಕಂಡ್ರೆ

ನಾನು ಕೆರೆಗೆ ಬೀಳ್ತೀನಿ ಅಂತ ಅಂದ್ರು. ಈಗ ಮದ್ವೆ ಇಚಾರಾನೇ ಎತ್ತಾಕಿಲ್ಲ.

ಕೆಂಚುಟಿಗ : (ತಲೆ ತಗ್ಗಿಸಿ) ಹೌದು ಸಾರ್.

ಗೋಪಾಲ : ಕೃಷ್ಣನಿಗೆ ಈಗ ಯಾರೂ ಇಲ್ಲ. ನೀವೇ ಅವನನ್ನು ಚನ್ನಾಗಿ ನೋಡ್ಕೋಬೇಕು. ಡಾಕ್ಟ್ರು ನಿಮ್ಮ ಜೊತೇಲಿ ಮಾತಾಡಬೇಕು ಅಂತಿದ್ದಾರೆ. ನಾಳೆ ಆಸ್ಪತ್ರೆಗೆ ಬನ್ನಿ.

ಯಾಲಕ್ಕಿ : (ಗಾಭರಿಯಿಂದ) ಅಯ್ಯೋ ಹೋಗ್ಬೇಡ ಕಣಣ್ಣ. ನಿನ್ನ ಹಿಡಿದು ಒಳಗೆ ಹಾಕಿ ಕೂಡಾಕಿಬಿಡ್ತಾರೆ. ಹುಚ್ಚರ ಸಾವಾಸ.

ಗೋಪಾಲ : ಹಾಗೆಲ್ಲ ಆಗೋಲ್ಲ ಯಾಲಕ್ಕಿ. ಬೇಕಾದರೆ ನೀನೂ ಬಾ. ಆಸ್ಪತ್ರೆಯನ್ನು ನೀನೂ ನೋಡ್ಕೊಂಡು ಬರೀವಂತೆ.

ಯಾಲಕ್ಕಿ : ಅಂಗಾ. ನೀವು ಹೇಳಿದ ಮ್ಯಾಕೆ ಬತ್ತೀನಿ. ನೀವು ನನ್ನನ್ನು ಉಸಾರಾಗಿ ನೋಡ್ಕೋಬೇಕು.

ಕೆಂಚುಟಿಗ : ಆಯ್ತು ಸಾರ್, ನಾಳೆ ಬರ್ತೀವಿ.

ಗೋಪಾಲ ನಮಸ್ಕಾರ ಮಾಡಿ ಹೊರಡುವನು.

— ತೆರೆ —

## ದೃಶ್ಯ 8

ಡಾಕ್ಟರ್, ನರ್ಸ್, ಗೋಪಾಲ, ಕೃಷ್ಣ, ಇದ್ದಾರೆ. ಒಂದು ಕಡೆಯಿಂದ ಕೆಂಚುಟಿಗ, ಯಾಲಕ್ಕಿ ಮಾರಯ್ಯ ಬರುತ್ತಾರೆ. ಡಾಕ್ಟರಿಗೆ ನಮಸ್ಕಾರ ಮಾಡಿ ನಿಲ್ಲುತ್ತಾರೆ. ಯಾಲಕ್ಕಿ ಕೃಷ್ಣನನ್ನು ಚೆನ್ನಾಗಿದ್ದೀಯಾ ಎಂದು ವಿಚಾರಿಸುತ್ತಾನೆ.

ಡಾಕ್ಟರ್ : ಕೃಷ್ಣ ಈಗ ಚೆನ್ನಾಗಿದ್ದಾನೆ ಮಾರಯ್ಯನವರೆ. ಒಂದು ವರ್ಷ ಜೈಲಿನಲ್ಲಿದ್ದಾಗ ಅನುಭವಿಸಿದ ನೋವು, ನಂತರ ತಂದೆಯ ಸಾವಿನ ದುಃಖ, ಇದಕ್ಕೆಲ್ಲಾ ಪರೋಕ್ಷವಾಗಿ ಕಾರಣರಾದ ಕೆಂಚುಟಿಗಯ್ಯನವರ ಮೇಲಿನ ಕೋಪ ಇವುಗಳಿಂದ ಮನಸ್ಸು ಕೆಟ್ಟು ಖಾಯಿಲೆ ಬಂತು. ಈಗ ನೀವೆಲ್ಲಾ ಅವನನ್ನು ಪ್ರೀತಿ ವಿಶ್ವಾಸಗಳಿಂದ ನೋಡಿಕೊಂಡರೆ ಚೆನ್ನಾಗಿ ಬದುಕುತ್ತಾನೆ. ಖಾಯಿಲೆ ಮತ್ತೆ ಬರುವುದಿಲ್ಲ.

ಕೆಂಚುಟಿಗ : ನನ್ನದು ತಪ್ಪಾಯ್ತು ಡಾಕ್ಟ್ರೆ. ದುರಾಶೆಯಿಂದ ನಮ್ಮ ಕೃಷ್ಣನಿಗೆ ಅನ್ಯಾಯ ಮಾಡ್ದೆ. ಅವನನ್ನು ಚೆನ್ನಾಗಿ ನೋಡಿಕೊಂಡರೆ ನನ್ನ ತಪ್ಪಿಗೆ ಪ್ರಾಯಶ್ಚಿತ್ತ ಆಯ್ತದೆ. ನಾವೆಲ್ಲಾ ನಿಂತು ಈಗ ನಿಂತು ಹೋಗಿರೋ ಕೃಷ್ಣನ ಮದ್ವೆಯನ್ನು ಜಬರ್ಾಗಿ ನಡೆಸಿಬಿಡ್ತೇವೆ.

ಮಾರಯ್ಯ : ರಂಗಯ್ಯ ತನ್ನ ಮಗಳನ್ನು ಕೃಷ್ಣನಿಗೇ ಕೊಡೋದು ಅಂತ ಪಟ್ಟು ಹಿಡಿದವ್ನೆ. ಆ ಹೆಣ್ಣಿಗೂ ಕೃಷ್ಣನನ್ನು ಕಂಡರೆ ಬೋ ಪ್ರೀತಿ.

ಯಾಲಕ್ಕಿ : ನಮ್ಮಳ್ಳೀಗೆ ನೀವೆಲ್ಲಾ ಬರಬೇಕ್ರೂ. ಲಾಡು ಊಟ ಹಾಕಿಸ್ತೀವಿ.

ಕೃಷ್ಣನ ಬಳಗ ಹೊರಡುವುದು.

— ತೆರೆ —

ಮುಂದಿನ ಮನೋ ವೈಜ್ಞಾನಿಕ ಹಾಸ್ಯರಂಜಿತ ನಾಟಕ : (ಡಾ॥ ಸಿ. ಆರ್. ಚಂದ್ರಶೇಖರ್ ಅವರ ನಾರದರ ಪರದಾಟ)

---

## ಮುದ್ರಣದ ದಾರಿ

(13ನೇ ಪುಟದಿಂದ)

ವನ್ನೂ ಲಿಥೊಕಲ್ಲಿನ ಮೇಲೆ ಬರೆಯಬೇಕಾಗಿತ್ತು. ಆದರೆ ಆಧುನಿಕತೆಯಲ್ಲಿ ಛಾಯಾಗ್ರಹಣ ತಾಂತ್ರಿಕತೆಯ ಹಾಗೂ ರಸಾಯನಿಕ ಮತ್ತು ಭೌತಶಾಸ್ತ್ರದ ಹಿನ್ನೆಲೆ ಇದ್ದರೆ ಸಾಕು.

### ಲಿಥೊಗ್ರಾಫಿಗೊಂದು ರೂವಾರಿ

ಲಿಥೊಗ್ರಾಫಿಯ ಬಗ್ಗೆ ಸಮಗ್ರ ಸಂಶೋಧನೆ ಮಾಡಲು ಹಾಗೂ ಮಾಹಿತಿಯನ್ನು ಒದಗಿಸಲು ಅಮೇರಿಕಾದಲ್ಲಿ ಗ್ರಾಫಿಕ್ ಆರ್ಟ್ಸ್ ಟೆಕ್ನಿಕಲ್ ಫೌಂಡೇಶನ್ (G.A.T.F.) ಎನ್ನುವ ಸಂಸ್ಥೆ ಹುಟ್ಟಿಕೊಂಡಿದೆ. ಇದು ಲಿಥೋಗ್ರಫಿ (ಆಫ್‌ಸೆಟ್) ಮುದ್ರಣದ ಬಗ್ಗೆ ಅದ್ಭುತ ಪ್ರಗತಿ ಸಾಧಿಸಿದೆ. ವಿವಿಧ ಬಣ್ಣಗಳ ಅಂದವಾದ ಮುದ್ರಣದ ಬಗ್ಗೆ ಕಂಪ್ಯೂಟರ್ ರೀತಿಯ ಮಾಹಿತಿಯನ್ನು ಒದಗಿಸಲು ಪಟ್ಟಿಗಳನ್ನು ತಯಾರಿಸಿದೆ. ಇದು ತಾನು ಸಂಶೋಧನೆ ಮಾಡುವುದರ ಜೊತೆಗೆ ವಿಶ್ವದಲ್ಲಿ ಆಫ್‌ಸೆಟ್ ಮುದ್ರಣದ ಬಗ್ಗೆ ಆಗಿರುವ, ಆಗುತ್ತಿರುವ ಬದಲಾವಣೆಗಳ ಬಗ್ಗೆ ಆಸಕ್ತಿ ವಹಿಸಿ ತಾಂತ್ರಿಕ ವಿನಿಮಯವನ್ನು ಮಾಡಿಕೊಳ್ಳುತ್ತದೆ. ಕಾಲಕಾಲಕ್ಕೆ ವಿಶೇಷ ಸುದ್ದಿ ಪತ್ರಿಕೆಗಳನ್ನು ಹೊರಡಿಸುತ್ತದೆ. 43 ರಾಷ್ಟ್ರಗಳಿಂದ 3500 ಸದಸ್ಯರನ್ನು ಹೊಂದಿರುವ ಒಂದು ವಿನೂತನ ಸಂಸ್ಥೆಯಾಗಿG.A.T.F. ರೂಪುಗೊಂಡಿದೆ. ರಂಗು ರಂಗಿನ ಬಣ್ಣಗಳ ಲಾಸ್ಯ ಸುಂದರ ವಿನ್ಯಾಸಗಳ, ರೂಪ ಚಮತ್ಕೃತಿಯ ಅತಿವೇಗದ ಮುದ್ರಣ, ಇವೆಲ್ಲಕ್ಕೂ ರೂಪ ಕೊಡುವ G.A T.F. ಆಧುನಿಕ ಆಫ್‌ಸೆಟ್ ಮುದ್ರಣದ ಹರಿಕಾರನಾಗಿ ಸಾಗುತ್ತಿದೆ, ದಾಪುಗಾಲು ಹಾಕುತ್ತಿದೆ. ❁

## ನಿಮಗಿದು ಗೊತ್ತೇ ?

- ಹಿಂದಿನ ಕಾಲದಲ್ಲಿ ಜನರಿಗೆ ರಕ್ತವು ದೇಹದಲ್ಲಿ ಪರಿಚಲಿಸುವುದೆಂಬ ವಿಷಯ ತಿಳಿದಿರಲಿಲ್ಲ. ಇಂಗ್ಲೆಂಡಿನ ವೈದ್ಯನಾದ ವಿಲಿಯಂಹಾರ್ವೆ ರಕ್ತ ಪರಿಚಲನೆಯನ್ನು ಕಂಡುಹಿಡಿದನು.
- ಸಣ್ಣ ಅಪಧಮನಿಗಳಿಂದ ರಕ್ತವು ಲೋಮನಾಳಗಳಲ್ಲಿ ಹರಿದು ಅಭಿಧಮನಿಗಳಿಗೆ ಬರುತ್ತದೆಂದು ಮ್ಯಾಲ್ಪೀಜಿ ಕಂಡುಹಿಡಿದನು.
- ಸಾಮಾನ್ಯವಾಗಿ ಒಬ್ಬ ಮನುಷ್ಯನ ದೇಹದಲ್ಲಿ ಸುಮಾರು 6.5 ಲೀಟರ್ ರಕ್ತವಿರುತ್ತದೆ.

(ಸಂಗ್ರಹ)

## ಲೇಖಕರಿಗೆ ಸೂಚನೆಗಳು

- ಜನಪ್ರಿಯ ವಿಜ್ಞಾನ, ಜನಪ್ರಿಯ ಶೈಲಿಯ, ಓದುಗರ ಆಸಕ್ತಿ ಕೆರಳಿಸುವಂಥ ವೈಜ್ಞಾನಿಕ ಲೇಖನಗಳನ್ನು ಸ್ವಾಗತಿಸುತ್ತದೆ ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.
- ಲೇಖನಗಳನ್ನು 'ನಿರ್ದೇಶಕರು, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಜ್ಞಾನಭಾರತಿ, ಬೆಂಗಳೂರು 560056', ಇವರಿಗೆ ಕಳಿಸಿಕೊಡಿ.
- ಲೇಖನಗಳ ಶೈಲಿ ಮತ್ತು ವಸ್ತುವನ್ನು ಮಂಡಿಸುವ ವಿಧಾನ ಪ್ರೌಢಶಾಲಾ ವಿದ್ಯಾರ್ಥಿಗಳು, ಪ್ರೌಢವ್ಯಾಸಂಗ ಮಾಡಿದ ಜನಸಾಮಾನ್ಯರುಗಳಿಗೆ ಅರ್ಥವಾಗುವಂತೆ ಸರಳ ಹಾಗೂ ಆಕರ್ಷಕವಾಗಿರಬೇಕು.
- ಲೇಖನಗಳು ಒಂದೇ ಮಗ್ಗುಲಲ್ಲಿ ಬರೆದ ಫುಲ್‌ಸ್ಕೇಪ್ ಹಾಳೆಯ 10 ಪುಟಗಳಿಗೆ ಮೀರದಂತೆ ಇರಬೇಕು.
- ಲೇಖನಗಳನ್ನು ಅಂದವಾದ ಅಕ್ಷರಗಳಲ್ಲಿ ಬರೆದಿರಬೇಕು ಅಥವಾ ಟೈಪ್ ಮಾಡಿರಬೇಕು.
- ಲೇಖನಗಳಿಗೆ ಸೂಕ್ತ ಚಿತ್ರಗಳನ್ನು ಒದಗಿಸಿದ್ದರೆ ಒಳ್ಳೆಯದು. ಛಾಯಾಚಿತ್ರಗಳಿದ್ದರೆ ಬ್ಲಾಕ್ ಮಾಡಿಸಲು ಬರುವಂಥ ಪೇಪರಿನಲ್ಲಿ ಅವನ್ನು ತಯಾರಿಸಿರಬೇಕು. ರೇಖಾಚಿತ್ರಗಳನ್ನು ಇಂಡಿಯನ್ ಇಂಕಿನಲ್ಲಿ ಬರೆದಿರಬೇಕು ಕಲಾವಿದರಿಂದಲೂ ಚಿತ್ರಗಳನ್ನು ಬರೆಸಿ ಕಳಿಸಬಹುದು. ಪ್ರಕಟಿಸಿದ ಚಿತ್ರಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು. ಉತ್ತಮ ಚಿತ್ರಗಳನ್ನು ತಯಾರಿಸಿ ಕಳಿಸಿಕೊಡಲಾಗದಿದ್ದರೆ ಚಿತ್ರಗಳ ಸ್ಪಷ್ಟವಾದ ಕರಡನ್ನಾದರೂ ಕಳಿಸಿಕೊಡಬೇಕು.
- ಅಂಕಿ ಅಂಶಗಳು, ಪ್ರಯೋಗ ಫಲಿತಾಂಶಗಳು, ಲೇಖನ ಮತ್ತು ಚಿತ್ರಗಳಿಗೆ ಆಧಾರಗಳಿದ್ದರೆ ಆಧಾರ ಗ್ರಂಥಗಳ ಹೆಸರನ್ನು ಲೇಖನದ ಕೊನೆಯಲ್ಲಿ ಸೂಚಿಸಿರಬೇಕು.
- ಪಾಶ್ಚಾತ್ಯ ಅಂಕಿತ ನಾಮಗಳು, ಪರಿಚಿತವಲ್ಲದ ಕನ್ನಡ ಪಾರಿಭಾಷಿಕ ಶಬ್ದಗಳನ್ನು ಬಳಸುವಾಗ ಅವುಗಳ ಇಂಗ್ಲಿಷ್ ಸಮಾನ ಶಬ್ದಗಳನ್ನು ಕಂಸಗಳಲ್ಲಿ ದಪ್ಪಕ್ಷರಗಳಲ್ಲಿ ಬರೆಯಬೇಕು.
- ವಿಜ್ಞಾನಿಗಳ ಹೆಸರುಗಳೊಂದಿಗೆ ಅವರ ರಾಷ್ಟ್ರ, ಸಂಶೋಧನೆ, ಪೂರ್ಣ ಹೆಸರು ಇವುಗಳ ವಿವರ ಇರಬೇಕು. ಎಲ್ಲ ರೀತಿಯ ಅಳತೆ ಮತ್ತು ತೂಕಗಳನ್ನು ಮೆಟ್ರಿಕ್ ಪದ್ಧತಿಯಲ್ಲಿ ಸೂಚಿಸಿರಬೇಕು.
- ಲೇಖನಗಳ ಪ್ರಕಟಣೆ ಬಗೆಗಿನ ಅಂತಿಮ ತೀರ್ಮಾನ ಸಂಪಾದಕ ಮಂಡಳಿಗೆ ಸೇರಿದ್ದು.
- ಪ್ರಕಟಣೆಗೆ ಸ್ವೀಕಾರವಾಗದ ಲೇಖನಗಳನ್ನು ಹಿಂದಿರುಗಿಸುವ ವ್ಯವಸ್ಥೆಯಿಲ್ಲ. ಲೇಖನಗಳನ್ನು ಹಿಂದಿರುಗಿಸಲು ಲೇಖಕರು ಅಪೇಕ್ಷಿಸಿದರೆ ಅದಕ್ಕೆ ಬೇಕಾಗುವ ಅಂಚೆ ಚೀಟಿಗಳನ್ನು ಮೊದಲೇ ಕಳುಹಿಸಬೇಕು.

### ಚಂದಾ ಅರ್ಜಿ

ಬೆಂಗಳೂರು ವಿಶ್ವವಿದ್ಯಾಲಯದ ಅಧ್ಯಾಪಕ ವರ್ಗ, ಬೋಧಕೇತರ ವರ್ಗ ಹಾಗೂ ವಿದ್ಯಾರ್ಥಿಗಳಿಗೆ ಶೇ 50% ರಿಯಾಯಿತಿ ಉಂಟು.

(ರಿಯಾಯಿತಿ ಕಳೆದು ವಾರ್ಷಿಕ ಚಂದಾ 6-00ರೂ.)

(ಇತರೆಯವರಿಗೆ ವಾರ್ಷಿಕ ಚಂದಾ 12-00 ರೂ.)

ಸಂಬಂಧಪಟ್ಟ ಕಾಲೇಜಿನ ಪ್ರಿನ್ಸಿಪಾಲರಿಂದ ತಾವು ಅಧ್ಯಾಪಕ/ವಿದ್ಯಾರ್ಥಿಗಳೆಂಬುದಕ್ಕೆ ಪ್ರಮಾಣ ಪತ್ರ ಒದಗಿಸಬೇಕು. ಬೋಧ-ಕೇತರರೂ ಸಂಬಂಧಪಟ್ಟ ಅಧಿಕಾರಿಗಳಿಂದ ತಾವು ವಿಶ್ವವಿದ್ಯಾಲಯಕ್ಕೆ ಸೇರಿದವರೆಂಬುದಕ್ಕೆ ಪ್ರಮಾಣಪತ್ರ ಒದಗಿಸಬೇಕು.

ನಿರ್ದೇಶಕರು
ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ
ಬೆಂಗಳೂರು – 560056

ಮಾನ್ಯರೆ,

ದಯಮಾಡಿ ನನ್ನನ್ನು 'ಜನಪ್ರಿಯ ವಿಜ್ಞಾನ'ದ ಚಂದಾದಾರನನ್ನಾಗಿ ಮಾಡಿಕೊಳ್ಳಿ/ನನ್ನ ಚಂದಾದಾರಿಕೆಯನ್ನು ನವೀಕರಿಸಿ. ವಾರ್ಷಿಕ ಚಂದಾಹಣ 12ರೂ. ಗಳನ್ನು ಎಂ.ಓ. ಮೂಲಕ ದಿನಾಂಕ.................1984ರಂದು ನಿರ್ದೇಶಕರು, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು 560056 ಇವರಿಗೆ ಕಳಿಸಿಕೊಡಲಾಗಿದೆ.

ಹೆಸರು..........................................

ಪೂರ್ಣವಿಳಾಸ..........................................

..........................................

..........................................

ಪ್ರಕಾಶಕರು : ನಿರ್ದೇಶಕರು, ಪ್ರಸಾರಾಂಗ ಮುದ್ರಣ : ಬೆಂಗಳೂರು ವಿಶ್ವವಿದ್ಯಾಲಯ ಮುದ್ರಣಾಲಯ, ಬೆಂಗಳೂರು